# ರಾಮಚಂದ್ರ.

(ಸಾಮಾಜಿಕ ಕಾದಂಬರಿ

ಜಂಗಮಕೋಟಿ ಕೃಷ್ಣಶಾಸ್ತ್ರಿ,

**ಸಾಹಿತ್ಯಸರಸ್ವತಿ, ವಿದ್ಯಾಭೂಷಣ.**

ಮೈಸೂರು ವಿದ್ಯಾಖಾತೆಯ ಸರ್ವಿಸ್ ತುಮಕೂರು.

ಇವರಿಂದ ರಚಿಸಲ್ಪಟ್ಟುದು

ತುಮಕೂರು

ಶ್ರೀ ಪಾರ್ಶ್ವನಾಥ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ ಮುದ್ರಿಸಲ್ಪಟ್ಟಿತು



ಬೆಲೆ ೧ ... ಅಂಚೆ ವೆಚ್ಚ ಬೇರೆ.

# ರಾಮಚಂದ್ರ.



**ಶೀತಲಾನದಿಯ ತೀರ. ಬೆಳಗ್ಗೆ ಹನ್ನೊಂದು ಘಂಟೆ**

ಏನು ರಾಮಾನಂದ, ಇನ್ನೂ ಹೀಗೆಯೇ ಇದ್ದೀರಿ? ಎಲ್ಲರೂ ಆಗಲೇ ಹೊರಟರಲ್ಲ.

ಆ! ಅಷ್ಟು ಹೊತ್ತಾಯಿತೆ? ಅಯ್ಯಾ, ದಯೆಯಿಟ್ಟು ನೀನು ನನಗೂ ಒಂದೆಲೆಯನ್ನು ಮಾಡಿರು. ನಾಪಿತನನ್ನು ನಿರೀಕ್ಷಿಸುತ್ತಿದ್ದೇನೆ. ಅದಾದ ಕೂಡಲೆ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಮನೆಗೆ ಹೊಕ್ಕು ಬಂದು ಬಿಡುವೆನು.

ಮಧ್ಯಾಹ್ನ ಒಂದು ಘಂಟೆಯೂ ಆಯಿತು. ರಾಮಾನಂದನು ಪೂರ್ವೋಕ್ತ ಕರ್ಮಗಳನ್ನೆಲ್ಲಾ ಮುಗಿಯಿಸಿಕೊಂಡು ಮನೆಗೆ ಹೋಗಿ—ಏನೆ, ಗಂಗಾಸಮಾರಾಧನೆಯ ಮನೆಯವರು ಎರಡನೆಯ ಸಲ ಕರೆಯುವುದಕ್ಕೆ ಬಂದಿದ್ದರೆ?

ಇಲ್ಲ. ಪುನಃ ಕರೆಯುವುದಕ್ಕೆ ಬರಲು ಜನಸಹಾಯವಿಲ್ಲ, ದಯೆಯಿಟ್ಟು ಎಲ್ಲರೂ ಹನ್ನೆರಡು ಘಂಟೆಗೆ ಬರಬೇಕು—ಎಂದು ಆಗಲೇ ಹೇಳಿರುವರಲ್ಲಾ? ಬೇಗ ಏಳಬಾರದೇ! ನಿಮಗೋಸ್ಕರ ನಾನು ಕಾದುಕಾದು ಸಾಕಾಯ್ತು.

ಏನೆಂದೆ? ನಾವೇನು ಅನ್ನಕಾಣದ ಕಂಗಾಳಿಗಳೊ ಎರಡನೆಯ ಸಲ ಕರೆಯಿಸಿಕೊಳ್ಳದೆ ಹೋಗುವುದಕ್ಕೆ? ಸರಿಸರಿ. ಇಷ್ಟವಿದ್ದರೆ ನೀನು ಹೋಗು—ಎಂದು ತಂದಿದ್ದ ಒದ್ದೆಬಟ್ಟೆಗಳನ್ನು ಮಡಿಸಿ ತಟ್ಟಿ ಕುಟ್ಟಿ ಹರಡುತ್ತ ಕಾಲವನ್ನು ಕಳೆದನು. ಯಜಮಾನರನ್ನು ಬಿಟ್ಟು ಸವಿಯೂಟಕ್ಕೆ ಹೋಗಲು ಇಷ್ಟವಿಲ್ಲ. ಆಕೆಯು ಖಿನ್ನಳಾಗಿ ಕುಳಿತಳು. ರಾಮಾನಂದನಿಗೂ ಆ ಊಟವನ್ನು ಬಿಡಲು ಮನಸ್ಸಿಲ್ಲ. ಮನೆಯಲ್ಲೋ ಅಡಿಗೆಯೇ ಇಲ್ಲ. ಕಡೆಗೆ ಹೆಂಡತಿಯ ಉಪಚಾರೋಕ್ತಿಗಳ ಮೂಲಕ ತನ್ನ ದರ್ಪವನ್ನು ಳಿಸಿಕೊಂಡಂತೆಯೂ ಆಕೆಯನ್ನು ಏನೋ ಉದ್ಧಾರಮಾಡುವಂತೆಯೂ ನಟಿಸಿದನು. ಇಬ್ಬರೂ ಭೋಜನಕ್ಕೆ ತೆರಳಿದರು.

ಎಲ್ಲರೂ ಬಂದು ಕುಳಿತಿದ್ದಾರೆ ಎಲೆಗಳನ್ನು ಹಾಕಬೇಕು. ದೊಡ್ಡ ಮನೆಯ ಧುಂಡಿಭಟ್ಟರೂ ಬಂದರು ಬಳಿಕ ಭೋಜನಕ್ಕೆ ಪ್ರಾರಂಭ. ಅತಿಥಿಗಳಲ್ಲಿ ಕೆಲವರು ವೇದಪಾರಾಯಣ, ಕೆಲವರು ಲೋಕವ್ಯವಹಾರದ ಸಂಭಾಷಣೆ, ಹೀಗೆ ನಿರತರಾಗಿದ್ದರು. ಅಭಿಘಾರವೂ ಆಯ್ತು. ಸರ್ವತ್ರ ನಿಶ್ಶಬ್ದ. ಪಾರ್ವತೀದೇವಿಯು ಬಂದು ಸಂಕಲ್ಪಮಾಡಿ ಅನ್ನವನ್ನು ಧಾರೆಯೆರೆದಳು. ಇದಕ್ಕೆ ಮೊದಲೇ ಪರಮಪಾವನೆಯಾದ ಗಂಗಾಮಾತೆಯ ದಿವ್ಯತೀರ್ಥವು ಪಙ್ಕ್ತಿಯಮೇಲೆ ಸರ್ವತ್ರ ವಿನಿಯೋಗಿಸಲ್ಪಟ್ಟಿದ್ದಿತು. ಎಲ್ಲರೂ ಭಕ್ತಿಯಿಂದ ಸ್ವೀಕರಿಸಿದ್ದರು. ಬಳಿಕ ಭೋಜನಕ್ಕೆ ಆರಂಭ ಅಂದು ಭಾನುವಾರ ಯಾರಿಗೂ ಆತುರವಿಲ್ಲ. ಸಾವಕಾಶವಾಗಿ ಆಗಬೇಕೆಂಬ ಮನೆಯವರ ಉಪಚಾರೋಕ್ತಿಗಳು ಬೇರೆ. ಮತ್ತು ಬಗೆಬಗೆಯ ಭಕ್ಷ್ಯಭೋಜ್ಯಗಳು. ಇವೆಲ್ಲಾ ಕ್ಲುಪ್ತಕಾಲವನ್ನು ಕಡೆಗೊತ್ತಿದವು. ಅನಾಹೂತರಾಗಿ ಬಂದ ಅತಿಥಿಗಳ ಸಂಖ್ಯೆಯೂ ಅಮಿತವಾಗಿಯೇ ಇದ್ದಿತು. ಇದರಿಂದ ಅನ್ನ ಮುಂತಾದ ಕೆಲವು ಪದಾರ್ಥಗಳನ್ನು ಪುನಃ ಅಡಬೇಕಾಯ್ತು ಇದಕ್ಕೋಸ್ಕರ ಕಾಲವನ್ನು ತೆಗೆದುಕೊಳ್ಳಲಿಕ್ಕೋ ಬಡಿಸಿದ್ದ ಪದಾರ್ಥಗಳೆಲ್ಲಾ ಸಂಪೂರ್ಣವಾಗಿ ವಿನಿಯೋಗವಾಗಲೆಂದೋ, ಆತುರಪಡಿಸಬಾರದೆಂಬ ಆದರಣೆಯಿಂದಲೋ, ಅಂತು ಹೇಗೋ ಎರಡನೆಯಸಲ ಬಡಿಸುವ ಕೆಲಸವು ಸ್ವಲ್ಪ ತಡವಾಯ್ತು. ಆಗ ಪುನಃ ಎಲ್ಲೆಲ್ಲೂ ಲೋಕಾಭಿರಾಮವಾದ ಸಂಭಾಷಣೆಯೇ.

ಪಾರ್ವತೀದೇವಿಯು ಪಙ್ಕ್ತಿಯಮೇಲೆ ಒಂದಾಗ ಧುಂಡಿಭಟ್ಟನು—ತಾಯಿ, ನಿಮ್ಮ ಜನ್ಮ ಸಾರ್ಥಕ. ನಿಮ್ಮ ಮಹಾಯಾತ್ರೆ ಸಿದ್ಧಿಸಿತು. ಈ ಲೋಕದಲ್ಲಿ ನೀವೇ ಧನ್ಯರು. ಆಹಾ ! ಏನು ಸಮಾರಾಧನೆ ! ಏನು ವಿತರಣೆ! ಎಲ್ಲಾ ನಳಪಾಕ ಭೀಮಪಾಕವೇ ! ಇಂದೇ ಸುದಿನ.

ಪಾರ್ವತೀದೇವಿ—ಅಪ್ಪ, ಒಡವಳ ಭಕ್ತಿ. ನನ್ನಂತಹವಳು ಏನು ಮಾಡಿಯೇನು. ಎಲ್ಲಾ ಭಗವಂತನ ಅನುಗ್ರಹ. ನಿಮ್ಮಂತಹ ಐಶ್ವರ್ಯವಂತರಾದರೂ ತೀರ್ಥಯಾತ್ರೆಮಾಡಿಕೊಂಡು ಬಂದರೆ ಎಷ್ಟೋ ವಿಜೃಂಭಣೆಯಿಂದ ನಡೆಯಿಸೀರಿ. ಕಾಶೀಗೆ ನಿಮ್ಮ ಪ್ರಯಾಣ ಯಾವಾಗ,ಧುಂಡಿಭಟ್ಟರೆ?

ಧುಂಡಿಭಟ್ಟ—ಅಮ್ಮ, ನಾನೇಕೆ ಕಾಶೀಗೆ ಹೋಗಬೇಕು? ಈ ದುರ್ಭಿಕ್ಷಕಾಲದಲ್ಲಿ, ಹೆಚ್ಚುವೆಚ್ಚಾ ದಂಡಾ ತೆತ್ತು, ದಾರಿಯಲ್ಲಿ ಕಷ್ಟನಷ್ಟಗಳನ್ನ

ನುಭವಿಸಿ, ಸಿಕ್ಕಿದ ನೀರನ್ನು ಕುಡಿದು, ರೋಗಾ ತಂದುಕೊಂಡರೆ ಗತಿಯೇನು? ಅರ್ಥಹಾನಿ, ಪ್ರಾಣಹಾನಿ. ನಿಮ್ಮಂತಹ ಪುಣ್ಯಾತ್ಮರು ಯಾರಾದರೂ ಯಾತ್ರೆ ಮಾಡಿಕೊಂಡು ಬಂದು ತೀರ್ಥಪ್ರಸಾದಗಳನ್ನು ಕೊಟ್ಟು, ಮೃಷ್ಟಾನ್ನ ಸಂತರ್ಪಣೆಯನ್ನು ಮಾಡಿಸಿದರೆ ಇದ್ದ ಕಷ್ಟವೇ ಎಲ್ಲವೂ ಆಯಿತು.

ಪಾರ್ವತೀದೇವಿಯು ನಿಜವಾಗಿಯೂ ಒಡವಳು ಪಟ್ಟಣದಲ್ಲ ಹುಟ್ಟಿ ಬೆಳೆದವಳು. ವಿದ್ಯಾವತಿ ವೃದ್ಧ. ಸ್ವರದಿಂದಲೇ ಸ್ವಭಾವವನ್ನು ತಿಳಿಯ ಬಲ್ಲ ಜಾಣೆ. ಆದುದರಿಂದ ಮೌನದಿಂದ ಮುಂದಕ್ಕೆ ತೆರಳಿದಳು.

ರಾಮಾನಂದನು ಹತ್ತಿರ ಕುಳಿತಿದ್ದ ವ್ಯಕ್ತಿಯನ್ನು ನಿರ್ದೇಶಿಸಿ ಧುಂಡಿ ಭಟ್ಟನನ್ನು ಕುರಿತು—"ಏನು ಸ್ವಾಮಿ ಇನ್ನೂ ಕೆಲವು ದೊಡ್ಡ ಸಂತರ್ಪಣೆ ಗಳ ಊಟ ಕಾದಿದೆ." ಎಂದು ಕಣ್ಣು ಮಿಟಿಕಿಸಿದನು

ಧುಂಡಿಭಟ್ಟ—ಓಹೋ! ಹೌದು ಸ್ವಾಮಿ, ಮರೆತಿದ್ದೆ ಏನು ಸೀತಾ ಕಾಂತ, ರಾಮಚಂದ್ರನಿಗೆ ಉಪನಯನ ಯಾವಾಗ?

ರಾಮಾನಂದ—ಶೀಘ್ರವಲ್ಲೇ. ತಂದೆಮಕ್ಕಳಿಬ್ಬರಿಗೂ ಒಟ್ಟಿಗೇ. ಇನ್ನೇನು ಈತನಿಗೆ ನೇತ್ರವೈದ್ಯರೂ ಮಗನಿಗೆ ಪುರೋಹಿತರೂ ಉಪನಯನ ಮಾಡಿಸುವರು.

ಸೀತಾಕಾಂತನು ಮುಗುಳುನಗೆಯಿಂದ ಸುಮ್ಮನಿದ್ದನು. ಈತನು ಈ ಊರಲ್ಲಿ ಗಣ್ಯನಾದೊಬ್ಬ ದೊಡ್ಡಮನುಷ್ಯ. ಗುಣಶಾಲಿ. ಚನ್ನಾಗಿ ಬದುಕಿದ ಮನೆತನದವನು. ಪ್ರಕೃತದಲ್ಲಿ ಲೇಖಕವೃತ್ತಿ ಇಪ್ಪತ್ತು ರೂಪಾಯಿಗಳ ಅಲ್ಪವೇತನ ಆದರೂ ಉದಾರಿ. ಈತನ ಮಾತಿನಲ್ಲಿ ತೂಕವುಂಟು. ಆದುದರಿಂದಲೇ ಈ ಸುಂದರಗಿರಿಗ್ರಾಮದ ದೊಡ್ಡಮನುಷ್ಯರ ಮಂಡಲಿಯಲ್ಲಿ ಈತನು ಪ್ರಮುಖ.

ಸುಂದರಗಿರಿಯು ಸಾಮಾನ್ಯಗ್ರಾಮ. ಪ್ರಜಾಸಂಖ್ಯೆ ಮೂರುಸಾವಿರ ಮಾತ್ರ ಬ್ರಾಹ್ಮಣರ ಮನೆಗಳಾದರೂ ಇಪ್ಪತ್ತೇ. ಸೀತಾಕಾಂತನಿಗೆ ಪೂರ್ವದಲ್ಲಿ ಕಾಲಕ್ಕೆ ನೂರುಖಂಡಗ ಪವಸದ ಆಯತಿ ಇದ್ದಿತಂತೆ. ಮನೆಯಲ್ಲಿ ನಡೆಯುವ ಶುಭಾಶುಭಕರ್ಮಗಳು, ದೊಡ್ಡಮನುಷ್ಯರ ಔತಣ ಉಪಚಾರಗಳು, ತಿಂಗಳಗಟ್ಲೆ ಬಂದು ತಿಷ್ಠಹಾಕುತ್ತಿದ್ದ ಬಾದರಾಯಣ ಸಂಬಂಧದ ಬಂಧುಬಳಗದವರಿಗೆ ಅನ್ನವಸ್ತ್ರಗಳು, ಯಾಚಕರಿಗೆ

ಭೂರಿದಕ್ಷಿಣೆಗಳು, ನಿತ್ಯಗಟ್ಲೆ ಅತಿಥಿ ಅಭ್ಯಾಗತರಿಗೆ ಮೃಷ್ಟಾನ್ನ ಭೋಜನ, ವಂಶಾನುಕ್ರಮವಾಗಿ ಬಂದ ದೇವರಸೇವೆಗಳು, ದಶಮಗ್ರಹಸ್ವರೂಪನಾದ ಜಾಮಾತನಿಗೂ ಬೀಗರಿಗೂ ನಡೆಸಿದ ಷೋಡಶೋಪಚಾರಗಳು, ಮಗಳಿಗೆ ಕೊಟ್ಟ ಬಳುವಳಿ, ಮೊದಲಿನ ಮತ್ತು ಈಗಿನ ಸರ್ಕಾರ್ಯಮಾಯಿಷಿಯಂತೆ ಹೆಚ್ಚಿದ ಕಂದಾಯ ಕವಳಿಗೆಗಳು, ವರಮಾನದ ತೆರಿಗೆ, ಮಠದ ದೀಪಾ ರಾಧನೆ ಕಾಣಿಕೆಗಳು, ಇವೇ ಮೊದಲಾದ ಎಲ್ಲಾ ವೆಚ್ಚಗಳಿಗೂ ಈ ಆಯ ತಿಯೇ ಉತ್ತರವಾದಿ. ಸೀತಾಕಾಂತನು ಸ್ವಂತವಾಗಿ ಆಳುಗಳನ್ನೂ ಎತ್ತು ಬಂಡಿಗಳನ್ನೂ ಇಟ್ಟುಕೊಂಡು ಆರಂಬವಮಾಡಿಸುತ್ತಿದ್ದನು. ಒರುಬರುತ ಸಕಾಲಗಳಲ್ಲಿ ಮಳೆಬೆಳೆಗಳಾಗಲಿಲ್ಲ. ಕೂಲಿಕಂಬಳಗಳ ಧಾರಣೆ ಹೆಚ್ಚಿತು. ಹೀಗೆ ಅನಿರೀಕ್ಷಿತವಾಗಿ ವೆಚ್ಚವು ಹೆಚ್ಚಿತು. ಆಯತಿಯು ತಗ್ಗಿತು. ತಕ್ಕಡಿ ಯೇಳುವುದೇ ಕಷ್ಟವಾಯ್ತು. ಸಾಲದುದಕ್ಕೆ ಕಾಲುಬಾಯಿಜ್ವರ ಮತ್ತು ದೊಡ್ಡರೋಗ ಬಂದು ಹಲವು ದನಕರುಗಳು ಸತ್ತುಹೋದುವು —ಹೀಗೆ ವರ್ಷಕ್ಕೆ ಸಾವಿರಾರು ರೂಪಾಯಿ ನಷ್ಟವಾಗುತ ಬಂದಿತು. ಇದರಿಂದ ಸ್ವಂತ ಬೇಸಾಯವನ್ನು ಬಿಟ್ಟನು. ಭೂಮಿಯನ್ನೆಲ್ಲಾ ವಾರಕ್ಕೆ ಕೊಟ್ಟನು. ಇದರಿಂದ ವರಮಾನವು ವರ್ಷಕ್ಕೆ ಇಪ್ಪತ್ತು ಖಂಡಗ ದವಸಕ್ಕೆ ಇಳಿಯಿತು. ಸೀತಾಕಾಂತನ ಹಿರಿಯರಿಂದ ಈ ಊರಿನ ಮತ್ತು ನೆರೆಹೊರೆಯ ಹಲವು ಹಳ್ಳಿಗಳವರಿಗೆ ಎಷ್ಟೋ ಸಹಾಯವಾಗಿದ್ದಿತು. ಈಗಲೂ ಈತನೂ ಎಲ್ಲರಿಗೂ ಪ್ರೀತಿಪಾತ್ರನೇ. ಹೇಗೂ ಏನೇನು ಹರಣಭರಣಶಕ್ತಿಗಳನ್ನು ವೆಚ್ಚಮಾಡಿ ದರೂ ಭೂಮಿಯ ಉತ್ಪತ್ತಿಯೇನೋ ಹೆಚ್ಚಲಿಲ್ಲ. ಕಡೆಗೆ ಈಗ್ಗಿಂತ ತಗ್ಗ ದಂತೆ ಮಾಡುವುದಕ್ಕೆ ಕೂಡ ಎಷ್ಟೋ ಕಷ್ಟ. ಇತರ ಪಂಗಡಗಳವರ ಸಮಾಜಸಂಸ್ಕರಣನಿಯಮಗಳು, ಸರ್ವತ್ರ ವಿದ್ಯಾಭ್ಯಾಸದ ಚಳುವಳಿ ಇಂತಹವೇ ಇದಕ್ಕೆ ಕಾರಣ. ವಾರದ ಭೂಮಿಗೆ ಶ್ರಮಪಟ್ಟು, ಬೆಳೆಯಕ್ಷ ದಣಿಗೆ ಪಾಲು ಕೊಡುವುದಕ್ಕಿಂತ ತಮ್ಮ ಸ್ವಂತ ಜಮಾನುಗಳನ್ನೇ ಕ್ರಮ ಪಡಿಸಿಕೊಂಡರ ತಾವು ಕುಬೇರರಾಗಬಹುದೆಂದು ರೈತರು ಭಾವಿಸುತ್ತ ಬಂದರು. ಒಂದುವೇಳೆ ದಾಕ್ಷಿಣ್ಯಕ್ಕೆ ಈ ನಮ್ಮ ಸೀತಾಕಾಂತನಂತಹ ದೊಡ್ಡಮನುಷ್ಯರ ಭೂಮಿಯನ್ನು ವಾರಕ್ಕೆ ಒಪ್ಪಿದರೂ ಮೂರಕ್ಕೆ ಬಣ್ಣ ವಾಗಿ ಮಾತ್ರ ಕಾಣುವಂತೆ ಉಳುವುದು, ಸ್ವಂತ ಕೆಲಸವನ್ನೆಲ್ಲಾ ತೀರಿ

ಕೊಂಡು ಆಕಾಲದಲ್ಲಿ ಬಿತ್ತುವುದು. ಹೀಗೆ ಮಾಡುವರು. ಪೈರು ಬಂದ ಮೇಲಾದರೂ ಆ ರೈತನ ಪಶುವರ್ಗವೇ ವಾರದ ಬೆಳೆಯ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಇತರ ದನಗಳು ಬಂದಾಗ ಮಾತ್ರ ಅವನ ಹೆಂಡಿರೋ ಮಕ್ಕಳೋ ಹೋಗಿ ಬೆದರಿಸುವರು. ಹೀಗಿರುವಲ್ಲಿ ಸೀತಾಕಾಂತನ ಜಮೀನು ಶ್ರಯಕ್ಕೆ ಬಂದು ಒಳ್ಳೆಯ ಉತ್ಪತ್ತಿಯನ್ನು ಕೊಡುವುದೆಂಬ ಆಸೆಯಾದರೂ ಉಂಟೆ ? ಈತನಿಗೆ ಸಾಲಸೋಲಗಳು ಹೆಚ್ಚಿದವು. ಸಾಹುಕಾರರು, ಸ್ಟಾಂಪ್ ವೆಂಡರುಗಳು, ಸರ್ವೆ ಪ್ಯಾದೆಗಳು, ಭತ್ಯಾ ಮಾನರು, ಲಾಯರುಗಳು ಇಂತಹ ಸ್ಥಳಪರಸ್ಥಳಗಳ ಜನಮಂಡಲಿಯಲ್ಲಿ ಬಳಕೆ ಹೆಚ್ಚಿತು. ಇವರೆಲ್ಲಾ ಇವನ ಗೃಹಕೃತ್ಯವಾದ್ಯಂತವನ್ನೂ ತಿಳಿಯಬಲ್ಲ ಆಪ್ತಬಂಧುಗಳಂತಾದರು ಇದುವರೆಗೂ ಹೊಟ್ಟೆಯೊಳಗಿದ್ದ ಹುಣ್ಣು ಈಗ ಹೊರಪಡಲು ಸೊಣಗಳ ಬಾಧೆಯು ಹೆಚ್ಚಿತೇ ವಿನಾ ಗುಣಪಡಿಸುವ ವೈದ್ಯರು ದೊರೆಯಲಿಲ್ಲ. ಆದರ ಜನರುಕೈಬಿಟ್ಟರೂ ಜನಾರ್ದನನು ಕೈಬಿಟ್ಟಾನೆ ? ಸದ್ಯಕ್ಕೆ ಸೀತಾಕಾಂತನಿಗೆ ಕುಶಲನಾದೊಬ್ಬ ಪರಮಾಪ್ತ ಮಿತ್ರನ ಬೆಲೆಬಾಳುವ ಸಲಹೆಯು ಸಕಾಲಕ್ಕೆ ಸಿಕ್ಕಿದುದು ಪುಣ್ಯವೇ ಸರಿ. ಇವನ ಆಸ್ತಿ ಸ್ವಾಸ್ಥ್ಯಗಳು ಕೋರ್ಟಿನಲ್ಲಿ ಹರಾಜಿಗೆ ಈಡಾಗಿ, ಬರುವ ಅಲ್ಪಸ್ವಲ್ಪ ದ್ರವ್ಯದಲ್ಲಿ ಬಕಪಕ್ಷಿಗಳಂತೆಯೂ ವೃಕಪೋತಗಳಂತೆಯೂ ಸಮಯವನ್ನು ಕಾಯುತ್ತಿರುವ ನ್ಯಾಯವಾದಿಗಳಿಗೂ ಉಳಿದುದು ಸಾಲಗಾರರಿಗೂ ಕೃಷ್ಣಾರ್ಪಣವಾಗಿ, ಸೀತಾಕಾಂತನು ಕಡೆಗೆ ಜ್ಞಾನಮಂಟಪಕ್ಕೆ ಸೇರಿ ಅವಮಾನಪಡಬೇಕಾಗುವುದೋ ಏನೋ ಎಂದು ಆ ಮಿತ್ರನು ಶಂಕಿಸಿ ಸಿದನು. ಜಮೀನಿನ ಸ್ವಲ್ಪ ಭಾಗವನ್ನು ಮಾರಿ ಈ ಋಣಗಳನ್ನು ತೀರಿಸಿ ಬರ ಉಳಿಯುವ ಸ್ವತ್ತಾದರೂ ಸುರಕ್ಷಿತವಾಗಬಹುದೆಂದು ಸೂಚಿಸಿದನು ಎಂತಹ ಕಷ್ಟನಷ್ಟಗಳು ಬಂದರೂ ಹಿರಿಯರ ಸಂಪಾದನೆಯ ಸ್ವತ್ತನ್ನು ಕಾಪಾಡಿಕೊಳ್ಳಬೇಕೆಂದೂ ಅದನ್ನು ವಿಕ್ರಯಿಸುವುದು ಅಪಕೀರ್ತಿಕರವೆಂದೂ ಹಠಾ ಹಿಡಿದಿದ್ದ ಸೀತಾಕಾಂತನು ಈಗ ಸುಮ್ಮನೆ ಸಮ್ಮತಿಸಬೇಕಾಯ್ತು. ಗೃಹಕೃತ್ಯವು ಈರೀತಿಯಾಗಿ ಪರಿಣಮಿಸಲು ಕೆಲವು ವೆಚ್ಚಗಳು ತಾವಾಗಿಯೇ ನಿಂತುಹೋದವು. ಬಂಧುವರ್ಗ, ಯಾಚಕರು, ಕಂದಾಯ ಬಡ್ಡಿ ಇತ್ಯಾದಿಗಳ ಹೆಚ್ಚು ಕಾಟವು ತಪ್ಪಿತು. ಆದರೇನು! ಸೀತಾಕಾಂತನ

ಒಂದಲ್ಲ ಒಂದುಯೋಚನೆಗೇನೋ ಈಡಾಗಿಯೇ ಇದ್ದನು. ಈತನು ಹಣದಲ್ಲಿಷ್ಟು ಬಡವನಾದರೂ ಗುಣದಲ್ಲಿ ಧನಿಕನೇ ಎಂಬ ಬಗ್ಗೆ ಜನರಿಗೆ ಈತನಲ್ಲಿದ್ದ ಗೌರವವೇ ದೃಷ್ಟಾಂತವು.



## ಎರಡನೆಯ ಪ್ರಕರಣ.

ಪಟ್ಟಕ್ಕೆ ಕುಳ್ಳಿರಿಸಿದ್ದ ಬೊಂಬೆಗಳೂ ಪ್ರದರ್ಶನದ ಇತರ ವಸ್ತುಗಳೂ, ಇನ್ನೂ ಪೆಟ್ಟಿಗೆಗಳೊಳಕ್ಕೆ ಸೇರಿಲ್ಲ. ಮನೆಗಳ ಬಹಿರಂತರ್ಭಾಗಗಳಲ್ಲಿ ಅಲಂಕಾರಕ್ಕೆಂದು ಕಟ್ಟಿದ್ದ ಮಾವು ಬಾಳೆಗಳ ಎಲೆಗಳು ಬಾಡಿ ಇನ್ನೂ ಕಳೆಗುಂದಿಲ್ಲ. ನವರಾತ್ರಿಯ ಅಭಿಷೇಕಪಾರಾಯಣಗಳೂ ರಾಮಪಟ್ಟಾಭಿಷೇಕವೂ ಮುಗಿದು ಎರಡು ಮೂರು ದಿನಗಳು ಮಾತ್ರ ಆಗಿವೆ. ಸಕಾಲ ಸುವೃಷ್ಟಿಯಿಂದ ಬೆಳೆಬಿತ್ತುಗಳೆಲ್ಲಾ ಸೊಂಪಾಗಿರುವುವು. ಕೆರೆಕಟ್ಟೆಗಳು ತುಂಬಿ ತುಳುಕುತ್ತಿರುವುವು. ತನ್ನ ಮೈಯಮೇಲೆ ಹೀಗೆ ಚೆಲುವಾಗಿ ಬೆಳೆದು ನಲಿದಾಡುವ ಸಸ್ಯಪ್ರಾಣಿಗಳನ್ನು ಆಕಾಶಗಾಮಿಗಳು ನೋಡಿದರ ದೃಷ್ಟಿ ದೋಷವಾದೀತೆಂಬ ಶಂಕೆಯಿಂದ ಭೂಮಾತೆಯು ಅಲ್ಲಲ್ಲಿ ತೆಳುವಾದ ಮೋಡದ ಮುಸುಕನ್ನು ಮೇಲೆ ಹೊದೆದುಕೊಂಡಿರುವಳೋ ಎಂಬಂತೆ ತೋರುವ ಸಮಯ. ಬಾದಾಸೊಂದು ಸಂಜೆ ಏಳುಗಂಟೆಯ ವೇಳೆ. ಒಂದು ವ್ಯಕ್ತಿಯು ಸಂಧ್ಯಾವಂದನೆಯನ್ನು ಮಾಡಿಕೊಂಡು ಶಿವಸ್ತುತಿಯನ್ನು ಹೇಳುತ್ತ ಹೊಳೆಯಿಂದ ಹಿಂದಿರುಗಿ ಹೊರಟು ಊರಬಾಗಿಲ ಮಾರುತಿಯ ಗುಡಿಯ ಮುಂದಣ ಅರಳಿಯಮರದ ನೆರಳಿನಲ್ಲಿ ಜಗತೀಕಟ್ಟೆಯ ಬಳಿಯಲ್ಲಿ ಬರುತ್ತಿದ್ದಿತು. ಹಳ್ಳಿಗಾಡಿನ ಪದ್ಧತಿಯಂತೆ ಆಗ್ಗಾಗಲೆ ಹಕ್ಕಿಗಳು ಗೂಡಿನೊಳಕ್ಕೆ ಹುದುಗಿಕೊಳ್ಳುವಂತೆ ಎಲ್ಲರೂ ಊರೊಳಕ್ಕೆ ಸೇರಿಕೊಂಡಿದ್ದರು. ಆಗ ಅದು ವಿಜನಾಂಗಣವಾಗಿದ್ದಿತು. ಆದರೂ ಆ ಅರ್ಧಾಂಧಕಾರದಲ್ಲಿ ಗುಡಿಯ ಪಡಸಾಲೆಯ ಮುಂದುಗಡೆ ಇನ್ನೊಂದು ವ್ಯಕ್ತಿಯು ಕಂಭಕ್ಕೆ ಒರಗಿ ಕುಳಿತುಕೊಂಡಿದ್ದುದು ಮೊದಲನೆಯ ವ್ಯಕ್ತಿಗೆ ಗೊತ್ತಾಗಲು— ಯಾರಲ್ಲಿ? ಎಂದು ಗರ್ಜನೆಯಾಯ್ತು.

ಎರಡನೇ ವ್ಯಕ್ತಿ—ಯಾಕೆ ? ನಾನು

ಒಂದನೆಯ ವ್ಯಕ್ತಿ—ಓಹೊ ! ಹೋ ! ಏನಯ್ಯ, ಇಲ್ಲಿದ್ದೀಯೆ ? ಬೆಳಗಿನಿಂದ ನಿಮ್ಮ ಮನೆಗೆ ಮೂರು ವೇಳೆ ಹೋಗಿದ್ದೆನು. ನೀನು ಸಿಕ್ಕಲಿಲ್ಲ. ಇದೇನು ! ಇಲ್ಲಿ ಹೀಗೆ ಒಬ್ಬನೇ ಕುಳಿತಿದ್ದೀಯೆ ?

ಎರಡನೆಯ ವ್ಯಕ್ತಿ—(ಮನದಲ್ಲಿ) ಆಹಾ ! ದೇವರು ದೊಡ್ಡವನು. ಪ್ರಾಣಮಿತ್ರನು ಸಕಾಲಕ್ಕೆ ಬಂದೊದಗಿದನು. ಪ್ರಕಾಶವಾಗಿ—ಓಹೊ ! ಅಲಭ್ಯಲಾಭ ! ಇದೇನಪ್ಪ ! ಯಾವಾಗ ಬಂದೆ ? ಎಲ್ಲರೂ ಸೌಖ್ಯವೆ ?

ಒಂದನೆಯ ವ್ಯಕ್ತಿ—ನಿನ್ನೆ ರಾತ್ರಿ ಬಂದೆನು ಶಂಕರಶರ್ಮನ ವರ್ಧಂತಿಗೆ ಬರಬೇಕೆಂದು ಅಮ್ಮನದೂ ತಮ್ಮನದೂ ಒತ್ತಾಯ ಇಷ್ಟರ ಮೇಲೆ ಕಾಗದ ಬೇರೆ. ಏನು ಮಾಡಲಿ ?

ಎರಡನೆಯ ವ್ಯಕ್ತಿ—ಬಹಳ ಸಂತೋಷ. ನಾಳೆ ಭಾನುವಾರವಷ್ಟೆ. ಸದ್ಯಃ ನೀನು ಬಂದುದು ನನಗೆ ಬರಗಾಲದಲ್ಲಿ ಹುಳಿಮಜ್ಜಿಗೆ ಸಿಕ್ಕಿದಂತಾಯ್ತು.

ಒಂದನೆಯ ವ್ಯಕ್ತಿ—ಅದೇನಪ್ಪ ಅಂತಹುದು ? ಉಂ, ಆಗಲಿ. ಮನೆಗೆ ಬಾ, ನೋಡೋಣ. ಈ ಬೆಳಗ್ಗೆ ನಮಗೆ ನಿನ್ನ ಪಚ್ಚಲಾಭದ ಪುಣ್ಯವಿರಲಿಲ್ಲ. ನೀನು ಹಳ್ಳಿಯಿಂದ ಸಂಜೆಗೆ ಹಿಂತಿರುಗಿ ಬರುವೆಯೆಂಬುದು ಗೊತ್ತು. ನಮ್ಮ ಮನೆಯವರು ಇನ್ನೂ ನಿರೀಕ್ಷಿಸುತ್ತಿದ್ದಾರೆ. ಹೋಗೋಣ. ನಿಮ್ಮ ಮನೆಯಲ್ಲಿ ತಿಳಿಸಿ ಅವರನ್ನೂ ಕರೆದುಕೊಂಡು ಹೋಗಬೇಕು.

ಎರಡನೆಯ ವ್ಯಕ್ತಿ—ಯೋಚನೆಯು ಯೋಜನಕ್ಕೆ ಏರಿದೆ. ಭೋಜನವೇ ಬೇಕಿಲ್ಲವಲ್ಲಾ !

ಒಂದನೆಯ ವ್ಯಕ್ತಿ—ಇರಲಿ. ಎಂತಹ ಯೋಚನೆಯಾದರೂ ಇರಲಿ. ಎದೆಗುಂದಬೇಡ, ಬಾ.

ಎರಡನೆಯ ವ್ಯಕ್ತಿ—ನಿನ್ನನ್ನು ಕಾಣುತಲೆ ನನ್ನ ವ್ಯಸನವೆಲ್ಲಾ ಗರುಡಪಕ್ಷಿಯನ್ನು ಕಂಡ ಸರ್ಪದಂತೆ ಓಡುವುದು ದಿಟ ಇನ್ನು ನನಗೆ ನಿರ್ಭಯ. ನೀನು ದಯೆಯಿಟ್ಟು ನಮ್ಮ ಮನೆಗೇ ಮಲಗುವುದಕ್ಕೆ ಬಂದರೆ ನನ್ನ ಕಷ್ಟನಿಷ್ಠುರಗಳನ್ನು ನಿಧಾನವಾಗಿ ವಿವರಿಸುವೆನು.

ಒಂದನೆಯ ವ್ಯಕ್ತಿ—ಆಹಾ! ಆಗಬಹದು.

ಇಬ್ಬರೂ ಜತೆಯಲ್ಲಿ ಹೊರಟರು. ಮಧುರಸಲ್ಲಾಪಗಳೊಡನೆ ಮೃಷ್ಟಾನ್ನ ಭೋಜನವಾಯ್ತು. ಗಂಧ ಪುಷ್ಪ ತಾಂಬೂಲಗಳಾದನಂತರ ಮಲಗುವ ಸ್ಥಳಕ್ಕೆ ಬಂದು ಕುಳಿತು ಲೋಕವ್ಯವಹಾರಮಾತುಗಳನ್ನಾಡ ತೊಡಗಿದರು. ಸ್ವಲ್ಪಹೊತ್ತಿನ ಬಳಿಕ ಉದ್ದಿಷ್ಟವಾದ ಆಲೋಚನೆಗೆ ಆರಂಭವಾಯ್ತು.

ವಾಚಕಮಿತ್ರರೆ, ಇವರಲ್ಲಿ ಎರಡನೆಯ ವ್ಯಕ್ತಿಯು ಸೀತಾಕಾಂತ ನೆಂದರಿಯಿರಿ. ಇವನು ಬಂದಕಷ್ಟಗಳನ್ನೆಲ್ಲಾ ಯಾವ ಆಪ್ತಮಿತ್ರನ ಬೆಂಬಲ ದಿಂದ ಪರಿಹರಿಸಿಕೊಂಡು ತನ್ನ ತನುಮನಧನಗಳನ್ನು ರಕ್ಷಿಸಿಕೊಂಡನೋ ಆ ಗಂಗಾರಾಮನೇ ಮೊದಲನೆಯ ವ್ಯಕ್ತಿ. ಗಂಗಾರಾಮನು ಸೀತಾಕಾಂತನ ಆಜೀವಿತಕೃತಜ್ಞತೆಗೆ ಪಾತ್ರನಾದವನು. ಸುಂದರಗಿರಿಗೆ ಸ್ಥಳಿಕ. ಆದರೂ ಪ್ರಕೃತದಲ್ಲಿ ಹತ್ತು ಮೈಲಿಯ ದೂರದ ಒಂದು ತಾಲ್ಲೂಕು ಕಛೇರಿಯಲ್ಲಿ ಪ್ರಧಾನಲೇಖಕನಾಗಿರುವನು. ವೇತನವು ಮಾಸಕ್ಕೆ ಮೂವತ್ತು ರೂಪಾಯಿ. ಪಿತ್ರಾರ್ಜಿತವಾದ ಭೂಸ್ಥಿತಿಯೂ ತಕ್ಕಮಟ್ಟಿಗುಂಟು. ಶ್ರೀಮಂತನಾಗ ಬೇಕೆಂದು ಸಂಕಲ್ಪಿಸಿದ್ದರೆ ಈತನು ರಾಜಕಾರ್ಯದಿಂದ ನಿವೃತ್ತನಾಗುವುದ ರೊಳಗಾಗಿ ಕೆಲವು ಸಾವಿರರೂಪಾಯಿ ರೊಕ್ಕವನ್ನಾದರೂ ಸಂಪಾದಿಸ ಬಹುದಾಗಿದ್ದಿತು. ಹೀಗೆ ಧನಾರ್ಜನೆಯಲ್ಲಿ ವಿರಕ್ತನಾದರೂ ಜ್ಞಾನಾರ್ಜನೆ ಯಲ್ಲಿ ಮಾತ್ರ ಈತನಿಗೆ ಪರಮದಾಹ. ಈತನು ಶಾಸ್ತ್ರಪರಿಜ್ಞಾನವೇ ಇಲ್ಲದೆ ಸದಾ ಮುಕ್ಕಿಕಾಮುಕ್ಕಿಯಾಗಿ ಬಿಳಿಯ ಹೊಲದಮೇಲೆ ಕರಿಯ ಬಿತ್ತಗಳನ್ನು ಬಿತ್ತುವಂತಹ ಲೇಖಕಮಾತ್ರದವನೂ ಅಲ್ಲ. ಅಥವಾ ಲೋಕಪರಿಜ್ಞಾನವೇ ಇಲ್ಲದ, ಹಾಗೂ ಅರ್ಥಜ್ಞಾನಶೂನ್ಯವಾದ ಅಧ್ಯಯನ, ಪಾರಾಯಣ, ಇತರ ರನ್ನು ನೋಡಿದರೆ, ಅವರ ನೆರಳು ಸೋಕಿದರೆ, ಧ್ವನಿಯನ್ನು ಕೇಳಿದರೆ, ಮೈಲಿಗೆ ಎಂದು ನೆಗೆದುಬೀಳುವುದು, ಇಂತಹ ಕಲ್ಯಾಣಗುಣಗಳಿಗೆ ಗಣಿ ಯಾದ ವೈದಿಕಮಾತ್ರನೂ ಅಲ್ಲ. ಬಾಲ್ಯದಲ್ಲಿ ಸ್ವಲ್ಪಮಟ್ಟಿಗೆ ವೇದಾಧ್ಯಯನ ಮಾಡಿ ಷೋಡಶಕರ್ಮಗಳಲ್ಲಿ ಯಾಜ್ಞಿಕವನ್ನು ಮಾಡಿಸಲು ದಕ್ಷನಾಗಿ ದ್ದನು. ನಾಟಕಾಂತ ಸಂಸ್ಕೃತವನ್ನು ವ್ಯಾಸಂಗಮಾಡಿದ್ದನು. ಇಂಗ್ಲಿಷ್ ನಲ್ಲಿ ಮೆಟ್ರಿಕ್ಯುಲೇಷನ್ ಪ್ಯಾಸಾಗಿದ್ದಿತು. ಆದರೂ ಈಗಿನ ಪಂಡಿತಂಮನ್ಯ

ರಾದ ಹಲವರಂತೆ ತಾನೇ ಸರ್ವಜ್ಞನೆಂದು ಭಾವಿಸಿಕೊಳ್ಳತಕ್ಕವನಲ್ಲ ಸದಾ ಹೊಸಹೊಸ ಸಂಗತಿಗಳನ್ನು ತಿಳಿದುಕೊಳ್ಳುತಲೇ ಇದ್ದನು ಹೀಗೆ ಈತನಿಗೆ ಲೋಕಶಾಸ್ತ್ರಮೌಢ್ಯಗಳೆರಡೂ ದೂರೋಪಾಸ್ತವಾಗಿದ್ದವು ಈತನು ಪರೋಪಕಾರದಲ್ಲಿ ಬದ್ಧಕಂಕಣನು.

ಸೀತಾಕಾಂತ—ಅಣ್ಣಯ್ಯ, ನೀನು ಎಷ್ಟೋ ಸಹಾಯ ಮಾಡಿದ್ದರೂ ಇನ್ನೂ ನನಗೆ ಕೊರಗು ತಪ್ಪಲಿಲ್ಲ. ಒಂದಲ್ಲ ಒಂದು ತೊಂದರೆಯು ಸಂಭವಿಸುತ್ತಲೇ ಇದೆ ಏನುಮಾಡಲಿ ?

ಗಂಗಾ—ಅಯ್ಯಾ, ನನ್ನ ಸಹಾಯವೇನು ? ದುಡ್ಡು ಕೊಡಲಿಲ್ಲ, ಕಾಸುಕೊಡಲಿಲ್ಲ. ಬರೀ ಬಾಯಿ ಮಾತು. ಊಂ ಆಗಲಿ. ಈಗೇನು ತೊಂದರೆ ?

ಸೀತಾ—ಇನ್ನೇನು, ಪುನಃ ವೆಚ್ಚ ರಾಮಚಂದ್ರನಿಗೆ ಉಪನಯನವಾಗಬೇಕು ಮೊನ್ನೆತಾನೆ ನಾಮಕರಣಕ್ಕೆ ಮಾಡಿದ ಚಿಲ್ಲರೆ ಕೈಸಾಲ, ಅಂಗಡಿಗಳ ಬಾಕಿ, ಎಲ್ಲಾ ಒಟ್ಟು ಒಂದುನೂರು ರೂಪಾಯಿ ಆಗಿದೆ ಭ್ರಮರಾಂಬೆಯ ಮದುವೆಗೆ ೧೦೦೦ ರೂ. ಅಮ್ಮನ ಉತ್ತರಕ್ರಿಯೆಗೆ ೫೦೦ ರೂ ಇದೆಲ್ಲಾ ಹೋದವರ್ಷ ಆಯಿತು ಹೀಗೆ ಪರಂಪರೆಯಾಗಿ ವೆಚ್ಚಗಳು ಒದಗಿದರೆ ನನ್ನ ಪರಿಣಾಮವೇನು ? ಹೇಗೆ ಸುಧಾರಿಸಿಕೊಳ್ಳಲಿ? ಈಗ ಈ ಮುಂಜಿಗೆ ಕನಿಷ್ಠಪಕ್ಷ ೫೦೦ ರೂಪಾಯಿಗಳಾದರೂ ಬೇಕು ಇರುವನೊಬ್ಬ ಹುಡುಗ. ತಕ್ಕಮಟ್ಟಿಗೆ ವಿಹಿತವಾಗಿ ಮಾಡಬೇಡವೆ ? ಏನುಮಾಡಲಿ ? ಬರಿಯ ಕೈಲಿ ಮೊಳಹಾಕಬೇಕಾಗಿದೆ

ಗಂಗಾ—ಎಲೈ ನಿಮ್ಮ ಮನೆಯ ಶುಭಾಶುಭಕರ್ಮಕಾಲದಲ್ಲಿ ನಾನು ಈಗಿನಂತೆ ಸಮೀಪಪ್ರದೇಶದಲ್ಲಿದ್ದಿದ್ದರ ಇಷ್ಟಕ್ಕೆ ಅವಕಾಶವಾಗದು ವಿಕಲ್ಪ ಅಷ್ಟುದುಂದು ? ಒಳ್ಳೆಯದು. ಹಣಕ್ಕೆ ಏನುಮಾಡಿದೆ ?

ಸೀತಾ – ಬಾಳೆಯತೋಟವನ್ನು ಮಾರಿಬಿಟ್ಟೆ.

ಗಂಗಾ—ಆ! ಅಯ್ಯೋ! ಮಕ್ಕಳಕೈಗೆ ಚಿಪ್ಪುಕೊಡುತ್ತೀಯಲ್ಲಯ್ಯಾ, ಮಹರಾಯ! ಆಗ ಬೇಕಾದಹಾಗೆ ಉಂಡು ಉಟ್ಟು ಹೊಗಳಿ ಹೋದವರು ಈಗ ನಿನ್ನ ಚಿಂತೆಯನ್ನು ಪರಿಹರಿಸಬಲ್ಲರೆ ? ಆಗಲಿ ಈಗೇನೂ ಸಾಲವಿಲ್ಲವಷ್ಟೆ ?

ಸೀತಾ—ಒಂದುನೂರು ರೂಪಾಯಿ ಇದೆಯೆಂದೆನಲ್ಲಾ!

ಗಂಗಾ—ಅಯ್ಯೋ, ಸಾಲವೇ ಶೂಲ. ನೂರುರೂಪಾಯಿ ಸಾಲಕ್ಕೆ ಸಾವಿರರೂಪಾಯಿ ಆಸ್ತಿಯೂ ತಡೆಯದು. ಜತೆಗೆ ಬಡ್ಡಿಯೋ ವಿಷದಂತೆ ಏರುವುದು. ಹೋಗಲಿ, ನಡೆದುಹೋದುದಕ್ಕೆ ನುಡಿದು ಫಲವೇನು? ಇನ್ನಾದರೂ ಎಚ್ಚರಿಕೆಯಿಂದಿರು. ಉಪನಯನಕ್ಕೆ ೫೦೦ ರೂಪಾಯಿಗಳೆ? ಏಕಪ್ಪ? ದುಡ್ಡು ಹೆಚ್ಚುವೆಚ್ಚವಾದರ ವಟುವು ದೊಡ್ಡಬ್ರಾಹ್ಮಣನಾಗು ವನೆ? ಸರಿಸರಿ. ಇಷ್ಟಾಗಬೇಕೆಂದವರು ಯಾರು!

ಸೀತಾ—ಎಲ್ಲರೂ ಹೇಳುವುದು ಸಾವಿರಾರು ರೂಪಾಯಿಗಳೇ. ನಾನೇ ಹೀಗೆ ಬಲುಕಡಿಮೆಯಾಗಿ ಹೇಳುತ್ತಿರುವುದು.

ಗಂಗಾ—ಹೇಳಿದವರ ಕಿವಿಕಿತ್ತರು. ಅವರು ಹಿತಚಿಂತಕರೆ? ವಿಶ್ವಾಸದ್ರೋಹಿಗಳು. ನಿನ್ನ ಬುದ್ಧಿ ನಿನ್ನ ಕೈಯಲ್ಲಿರಬೇಕು. ಅವರಿಗೇನು? 'ಕಂಡವರ ಮನೆಯಲ್ಲಿ ನೋಡು, ನನ್ನ ಕೈ ಧಾರಾಳ' ಎನ್ನುತ್ತಾರೆ. ಒಳ್ಳೆ ಯದು, ಸುಮ್ಮನಿರು. ಗಾಬರಿಯೇಕೆ? ಒಂದು ಪಟ್ಟಿಯನ್ನು ತಯಾರ್ಮಾ ಡಿಸು. ತರುವಾಯ ಯೋಚಿಸೋಣ. ಬೆಳಗ್ಗೆ ನಾನು ಹಳ್ಳಿಯಕಡೆ ಹೊರಟು ಗದ್ದೆಯನ್ನು ನೋಡಿಕೊಂಡು ಹಾಗೆಯೇ ಊರಿಗೆ ಹೊರಡು ವೆನು. ನಾಳೆ ಕ್ರಿಸ್‌ಮಿಸ್ ರಜಾದಲ್ಲಿ ಹೆಚ್ಚು ಅವಕಾಶ. ಆಗ ಎಲ್ಲವನ್ನೂ ಏರ್ಪಡಿಸಿಕೊಳ್ಳೋಣ.

ಸೀತಾ—ಏನೋ ಅಪ್ಪ. ನಿನ್ನನ್ನೇ ನಂಬಿದ್ದೇನೆ. ಹೇಗಾದರೂ ಮಾನಸಂರಕ್ಷಣೆಮಾಡುವಭಾರ ನಿನ್ನದು.

ಬಳಿಕ ಪ್ರಕೃತಿಯ ಪ್ರಿಯಪುತ್ರಿಯಾದ ನಿದ್ರಾದೇವಿಯು ಅನುಗ್ರ ಹಿಸಿದಳು. ಸೀತಾಕಾಂತನನ್ನು ಹಿಡಿದಿದ್ದ ಚಿಂತಾದೇವಿಯು ಈಗ ಅಂತ ರ್ಧಾನವಾದಳು.

## ಮೂರನೆಯ ಪ್ರಕರಣ.

ರಾಮಚಂದ್ರನು ನವರಾತ್ರಿಯ ರಜಾದಲ್ಲಿ ಊರಿಗೆ ಬಂದಿದ್ದವನು ಇನ್ನೂ ಪುನಃ ಪ್ರಯಾಣಮಾಡಿಲ್ಲ.

ಏನೋ ಮಗೂ, ಹೀಗೆ ಕೆಟ್ಟುಹೋದೆ? ನಿಂತನಿಲುವಿನಲ್ಲೇ ನೀರು

ಕುಡಿಯುತ್ತೀಯಲ್ಲೋ. ನೀನು ಬ್ರಾಹ್ಮಣನೆ? ಇದೇನೋ ನೀನು ಇಙ್ಲೀಷು ಓದಿಕಲಿತದ್ದು? ನೋಡು, ಅಪ್ಪ ಹೀಗೆ ಮಾಡುತ್ತಾರೆಯೋ?

ಏನು ಅಜ್ಜಿ, ನಿಂತು ನೀರು ಕುಡಿದರೆ ಜಾತಿಕೆಡುವುದೆ? ಅದೆಂತಹ ಜಾತಿ! ಅಜ್ಜಿ, ನಿನಗೇನು ಗೊತ್ತಿದೆ? ಹಿಂದೆ ಕ್ರೂರರಾದ ಮತಾಂತರದವರು ಬಂದು, ನಮ್ಮ ಹಿಂದುಗಳನ್ನೆಲ್ಲಾ ಜಾತಿಕೆಡಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳಬೇಕೆಂದು ಕತ್ತಿಕಠಾರಿಗಳನ್ನು ಪ್ರಯೋಗಿಸಿ ಬಲಾತ್ಕರಿಸಿದರೂ ನಮ್ಮ ಮತವು ನಿರ್ಮೂಲವಾಗಲಿಲ್ಲ ನಮ್ಮ ಬ್ರಾಹ್ಮಣಜಾತಿಯು ಇಂತಹುದಕ್ಕೆಲ್ಲಾ ಅಳಿಸಿಹೋಗುವುದೆಂದು ತಿಳಿದಿದ್ದೀಯಾ!

ಪಟ್ಟಣಾಸೇರಿ ಇಙ್ಲೀಷು ಓದಿ ನೀನು ಕುಲಗೆಡುವುದಲ್ಲದೆ ಎದುರು ಮಾತಾಡುವುದನ್ನೂ ಕಲಿತುಕೊಂಡುಬಿಟ್ಟೆಯಲ್ಲಪ್ಪಾ!

ಅಜ್ಜಿ, ಇಷ್ಟು ಮಡಿಮಾಡುವ ನಿನ್ನಂತಹವರೇ ಹಾದಿಹಾರಿ ಎಂಜಲೆಲೆಯಮೇಲೆಯೇ ಕಾಲಿಡತಕ್ಕವರು

ಇಷ್ಟೆಂಬ ವೇಳೆಗೆ ಸರಿಯಾಗಿ—"ಅಮ್ಮ ಒಬ್ಬಟ್ಟಿನ ಮನೆ ಬಿಡುವಾಗಿದೆ. ಸ್ನಾನಕ್ಕೆ ಹೊರಡು. ಮಗು, ಬಾರಪ್ಪ ಬಡಿಸಿದೆ. ಎಲ್ಲರೂ ಕಾದಿದ್ದಾರೆ." ಎಂಬ ಮಾತುಗಳು ಒಳಗಿನಿಂದ ಕೇಳಬಂದವು. ಇದು ಇಂದಿರೆಯ ಧ್ವನಿ ಇಂದಿರೆಯು ಕೇವಲಕುಶಲೆ. ತನ್ನ ತಾಯಿ ಅನ್ನಪೂರ್ಣಾದೇವಿಗೂ ಮಗನಾದ ರಾಮಚಂದ್ರನಿಗೂ ಸರಸವಾಗಿ ಆಂಕುರಿಸಿ ವಿರಸವಾಗಿ ಪರಿಣಮಿಸಬಹುದಾದ ವಾಗ್ವಾದಗಳನ್ನೆಲ್ಲಾ ಉಪಾಯದಿಂದ ತಪ್ಪಿಸುವಳು. ಪತಿಯು ತಾಪತ್ರಯದಿಂದ ಚಿಂತಿಸುತ್ತಿದ್ದಾಗ ಸಂತೈಸಿ ಮೇಲಾದ ಸಲಹೆಗಳನ್ನು ಕೊಡುವಳು ಆದರೆ ಮತಪದ್ಧತಿಗಳಿಗೂ ಪೂರ್ವಾಚಾರಗಳಿಗೂ ಸ್ವಲ್ಪವೂ ವಿರೋಧವಾಗಿ ನಡೆಯಕೂಡದೆಂದೂ ಎಲ್ಲಾ ತುಂಬ ಧಾರಾಳವಾಗಿಯೂ ವಿಜೃಂಭಣೆಯಾಗಿಯೂ ನಡೆಯಬೇಕೆಂದೂ ಮಾತ್ರ ಹಠಹಿಡಿಯುವಳು. ಮಕ್ಕಳ ಮನಸ್ಸಿಗೆ ಈಷತ್ತೂ ಬೇದವಾಗದಂತೆ ಲಾಲಿಸುವಳು. ಆದರೆ ಅತಿಯಾಗಿ ಮುದ್ದಿಸಿ ತಲೆಯಮೇಲೆ ಕುಳ್ಳಿರಿಸಿಕೊಳ್ಳತಕ್ಕವಳಲ್ಲ. ನಯಭಯಗಳಿಂದ ಹದ್ದಿನಲ್ಲಿಟ್ಟುಕೊಂಡಿರತಕ್ಕವಳು.

ರಾಮಚಂದ್ರನು ಎರಡು ಗಾವುದ ದೂರದ ಅಮರಪುರದ ಇಂಗ್ಲಿಷ್ ಹೈಸ್ಕೂಲಿನ ಕೀಳ್ತರಗತಿಯಲ್ಲಿ ಮೇಲಾದ ವ್ಯಾಸಂಗದಿಂದ ನೊಗಲನೆಯುವ

ನಾಗಿರುವನು. ನೋಥಾ ಅದರ ಮುದುಕರನ್ನು ಕುಚೇಷ್ಟೆ ಕುಚೋದ್ಯಗಳಿಂದ ರೇಗಿಸುವುದರಲ್ಲಿ ಅವನಿಗೆ ಬಹಳ ವಿನೋದ. ಅಮರಪುರದಲ್ಲಿ ತನ್ನ ಚಿಕ್ಕಮ್ಮನ ಮನೆಯ ಎಂಬತ್ತು ವರ್ಷದ ಅಜ್ಜನಸಂಗಡ ನಿತ್ಯವೂ ಸರಸವಾಡುತ್ತಿದ್ದ ಅಭ್ಯಾಸವೂ ಕೆಲವು ಹುಡುಗರ ಸಹವಾಸವೂ ಇದಕ್ಕೆ ಮೂಲಕಾರಣ.

ಅನ್ನಪೂರ್ಣೆ—ಇಂದಿರಾ, ಏನಮ್ಮ? ಏನು ಯೋಚಿಸಿದಿರಿ? ಎಳೆಯ ಕೂಸಾಗಿರುವಾಗಲೇ ಒಂದು ಎಳೆಯನ್ನು ಹಾಕಿದರೆ ಕಣ್ಣುತುಂಬ ನೋಡಿ ಸಂತೋಷಪಡ್ತೇನು ಆರಿಸಿನದಪಂಚ ಉಟ್ಟುಕೊಂಡು ದಂಡಕೋಲು ಹಿಡಿದುಕೊಂಡು ಹಣೆಗೆ ಗೋಪೀಚಂದನದ ಬೊಟ್ಟನ್ನಿಟ್ಟುಕೊಂಡು ಕಣ್ಣಿಗೆ ಕಪ್ಪುಹಚ್ಚಿಕೊಂಡು ಕೊರಳಿಗೆ ಜೋವಾಲೇಸರಾ ಹಾಕಿಕೊಂಡು ಜನಿವಾರಕ್ಕೆ ಕೃಷ್ಣಾಜಿನಾ ಕಟ್ಟಿಕೊಂಡು ಸೊಂಟಕ್ಕೆ ನೊದೇಹುಲ್ಲುಹುರೀ ಕಟ್ಟಿಕೊಂಡು ಕೈಲಿ ಬಟ್ಟಲು ಹಿಡಿದುಕೊಂಡು 'ಭವತಿಂಭಿಕ್ಷಾಂದೇಹಿ' ಎಂತಾ ಮಗೂ ಬಂದರ ನೋಡುವುದಕ್ಕೆ ಎಷ್ಟು ಚನ್ನೋ! ಅಯ್ಯೋ! ನಾನು ನೋಡುತ್ತೇನೆಯೇ! ಯಾವಾಗ ಬಾಯಿ ಮುಚ್ಚಿಕೊಳ್ಳುತ್ತೇನೋ! (ಗಳಗಳನೆ ಅತ್ತಾಳು)

ರಾಮಚಂದ್ರ—(ಥಟ್ಟನೆ ಎಲ್ಲಿಂದಲೋ ಒಂದು ಕಿಲಕಿಲನೆ ನಗುತ್ತ) ಅಜ್ಜಿ, ನಿನ್ನ ಮೊಮ್ಮಗ, ದಾಸಯ್ಯನವೇಷವನ್ನು ಹಾಕಿಕೊಂಡು ನಡುವಿಗೆ ಹಗ್ಗವನ್ನು ಕಟ್ಟಿಕೊಂಡು ಹಣೆಗೆ ಬಣ್ಣವನ್ನು ಬಳಿದುಕೊಂಡು ತಿರುಪಕ್ಕೆ ಹೊರಟದ್ದನ್ನು ನೋಡಿ ಸಾಯಬೇಕೆಂದು ಕೋರುತ್ತಿದ್ದೀಯಾ? ಆಗಲಿ ಯಮ್ಮ, ಬಲು ಒಳ್ಳೆಯ ಅಜ್ಜಿ. ಇಂತಹ ಹಿರಿಯರ ಇರಬೇಕು.

ಅನ್ನಪೂರ್ಣೆ—ನೋಡೇ ಇಂದಿರಾ, ಇವನ ಅರ್ಥ! ಚೀ, ಬಿಡಿತು ಅನ್ನಪ್ಪ ನನ್ನ ಕಂದ!

ರಾಮಚಂದ್ರ—ಭಲೆಭಲೆ ಒಳ್ಳೆಯ ಮುದುಕಿ! ಅನ್ನುವುದನ್ನು ಅಂದು ಬಿಟ್ಟು ಈಗ ಬಿನ್ನಾಣದಿಂದ ಬದಲಾಯಿಸುತ್ತೀಯಾ? ಅಜ್ಜಿ, ನಿನಗೇಕಮ್ಮ ಕೋಪ? ಇನ್ನು ನಾನು ಇಲ್ಲಿರುವುದಿಲ್ಲ ನಾಳೆಯೇ ಹೊರಡುವೆನು. ನಿನ್ನ ಮಡಿಗೆ ಏನೂ ತೊಂದರೆ ಬೇಡಮ್ಮ.

ಅಣ್ಣ—ಅಯ್ಯೋ ಮಗು ! ಕೋಪಿಸಿಕೊಳ್ಳಬೇಡವೊ ದೀವಳಿಗೆಯಾದ ಮೇಲಾದರೂ ಹೊರಡೂ ನಾನು ನಿನ್ನನ್ನೇನೂ ಅನ್ನಲಿಲ್ಲವಲ್ಲಪ್ಪ ?

ಇಷ್ಟರಲ್ಲೇ ಸೀತಾಕಾಂತನು ಮಗನನ್ನು ಕರೆದನು. ಪುಸ್ತಕಗಳಿಗೆಷ್ಟು ಬೇಕೆಂಬುದನ್ನು ಚರ್ಚಿಸಿ ಪತ್ರರೂಪಾಯಿ ಕೊಟ್ಟನು.

ಮಾರನೆಯ ಶನಿವಾರ ರಾಮಚಂದ್ರನ ಪಯಣ ಸೋಮವಾರ ಶಾಲೆಯನ್ನು ತೆರೆಯುವರು. ಇವನು ನೂತನದ ವಿದ್ಯಾರ್ಥಿ. ಮತ್ತು ವ್ಯಾಸಂಗದಲ್ಲಿ ಕೇವಲ ಕುತೂಹಲಶಾಲಿ ಎಂದಿಗೂ ಶಾಲೆಗೆ ತಪ್ಪಿಸಿಕೊಳ್ಳತಕ್ಕವನಲ್ಲ ಆದಿನಬೆಳಗ್ಗೆ ಎಂಟು ಘಂಟೆಗೆ ಭೋಜನವಾಯ್ತು. ಬಾಗಿಲ ಬಳಿಗೆ ಬಂಡಿಯು ಒಂದು ನಿಂತಿತು. ಇದು ಈಗ್ಗೆ ೩೦ ವರ್ಷಕ್ಕೆ ಹಿಂದಣಕಾಲದ ವಿಷಯ. ಆಗ್ಗೆ ಮೋಟಾರು ಮೊದಲಾದ ಸೌಕರ್ಯಗಳಿರಲಿಲ್ಲ ಚಕ್ಕುಲಿ, ಕೋಡಬಳೆ, ಪುಳ್ಳಂಗಾಯಿ, ಅರಳುಹಿಟ್ಟು ಇವುಗಳ ಗಂಟು, ಪುಸ್ತಕದ ಪೆಟ್ಟಿಗೆ, ಹಾಸಿಗೆಯ ಸುರುಳಿ, ಇವುಗಳೆಲ್ಲಾ ಬಂಡಿಯೊಳಕ್ಕೆ ಸೇರಿದವು. ಹುಡುಗನು ದೇವರಿಗೂ ಜನನೀಜನಕರಿಗೂ ಮಾತಾಮಹಿಗೂ ನಮಸ್ಕಾರ ಮಾಡಿ, ತೊಟ್ಟಿಲಲ್ಲಿ ಚಟುವಟಿಕೆಯಿಂದ ಆಡುತ್ತ ನಗುತ ಮಲಗಿದ್ದ ತನ್ನ ತಂಗಿ ಮೀನಾಕ್ಷಿಗೆ ಮುತ್ತುಕೊಟ್ಟನು. ಬಳಿಕ ಬಂಡಿಯಲ್ಲಿ ಕುಳಿತು ಕೊಂಡು ತಂದೆಯ ಬುದ್ಧಿವಾದವನ್ನು ವಿನಯದಿಂದ ಸ್ವೀಕರಿಸಿ ತೆರಳಿದನು ಕಣ್ಣಿಗೆ ಕಾಣುವವರೆಗೂ ಮನೆಯವರೂ ನೆರೆಹೊರೆಯವರೂ ಸಂಗಾತಿಗಳೂ ರಾಮಚಂದ್ರನನ್ನು ಪ್ರೇಮಪೂರ್ಣವಾದ ದೃಷ್ಟಿಯಿಂದ ನೋಡಿದರು ವಾತ್ಸಲ್ಯದಿಂದ ಹೃದಯವು ಕರಗಿ ಉಕ್ಕಿ ಹರಿಯುವುದೋ ಎಂಬಂತೆ ಇಂದಿರೆಯ ಕಣ್ಣುಗಳಿಂದ ಬಿಸಿನೀರಿನ ಹನಿಗಳು ಉದುರುತ್ತ ಬಂದುವು. ಸೀತಾಕಾಂತನು ಶಾಂತನಾಗಿದ್ದನು 'ಈಗಿನಕಾಲದಲ್ಲಿ ವಿದ್ಯೆಗೆಂದು ಹಸುಮಕ್ಕಳನ್ನು ಪರಸ್ಥಳಕ್ಕೆ ಅಟ್ಟುತ್ತಾರೆ. ಏನು ವಿದ್ಯೆಯೋ ! ' ಎಂದು ಮುದುಕಿಯ ಗೊಣಗಾಟಗಳು ನಡೆದುವು

ರಾಮಚಂದ್ರನು ಹೊರಟುಹೋದನು. ಮನೆಯೆಲ್ಲಾ ಭಿಂ ಎನ್ನುತ್ತಿದೆ. ಎಲ್ಲರ ಮನಸ್ಸೂ ಏನೋ ಒಂದು ವಿಧವಾಗಿದೆ. ಮಾತಾಪಿತೃಗಳಿಗೆ ಆ ಮಧ್ಯಾಹ್ನ ತಿಂಡಿಯೇ ಬೇಕಾಗಲಿಲ್ಲ ರಾತ್ರಿಯೂಟವೂ ಸರಿಯಾಗಿ ಸೇರಲಿಲ್ಲ. ಹೇಗೋ ಆ ರಾತ್ರಿಯೂ ಆಯಿತು. ಬಳಿಕ ದಂಪತಿಗಳ ಸಂವಾದ.—

ಇಂದಿರ—ನಿನ್ನೆ ಮಧ್ಯಾಹ್ನ ಮಗುವಿನ ಮಾತನ್ನು ಕೇಳಿದಿರಾ ?

ಸೀತಾ—ಏನು ? ಮಗು ವಿಲಾಸೆಯು ಆಗಲೇ ಮಾತನಾಡುತ್ತಾಳೆಯೆ ?

ಇಂದಿರ—ಅಲ್ಲ ಅಂದರೆ. ಅಯ್ಯೋ ಹಸುಕಂದ ! ಪಾಪ ! ನಮ್ಮ ರಾಮಚಂದ್ರ ಆಡಿದ್ದು !

ಸೀತಾ—ಏನಂದ ?

ಇಂದಿರೆ—ಇನ್ನೇನೂ ಇಲ್ಲ. ಪಟ್ಟಣವಾಸ ಪರಂಗಿಯವರ ಪಾಠವಂತೆ. ಎಂತೆಂತಹ ಸಹವಾಸವೋ ಏನೋ ! ಸದ್ಯಃ ಜಾತಿನೀತಿಗಳು ಕೆಡದೆ ಹುಡುಗ ಯೋಗ್ಯನಾಗಿದ್ದರೆ ಸಂತೋಷ.

ಅದೇನು ? ಹಾಗೆಂದರೆ? ಅಂತಹ ಸೂಚನೆಯೇನಾದರೂ ಉಂಟೊ? ಹುಡುಗ ಸಭ್ಯ ಘಿಂತ. ಹಾಗೆ ಹೋಗಲಾರನಲ್ಲಾ !

ನಿಜ. ಅಂತಹುದನ್ನೇನೂ ಕಾಣೆ. ಆದರೆ ಅಮ್ಮನನ್ನು ಅವನು ಗೇಲಿ ಮಾಡಿದುದನ್ನು ನೋಡಿದರೆ ನನಗೆ ಗಾಬರಿಯಾಗುತ್ತಿದೆ. ಅಷ್ಟೇ. ಅದು ಹಾಗಿರಲಿ. ನಾನು ಕೇಳಿಕೊಂಡ ವಿಷಯವಾಗಿ ಏನು ಮಾಡಿದಿರಿ ? ಯಾವಾಗ ಲಗ್ನ ? ಖರ್ಚುವೆಚ್ಚಗಳಿಗೇನು ಮಾಡಬೇಕು ? ಕಾಲಾತೀತವಾಯ್ತಲ್ಲಾ ! ಕೇಳಿಕೇಳಿದವರಿಗೆಲ್ಲಾ ಉತ್ತರಹೇಳುವುದು ಕಷ್ಟ. ಮಗು ಇಲ್ಲಿದ್ದಾಗ್ಗಿಂತ ಚೆನ್ನಾಗಿ ಬೆಳೆದು ಪುಷ್ಟನಾಗಿದ್ದಾನೆ. ಈ ವರ್ಷವಾದರೂ ಮುಂಜಿಮಾಡದಿದ್ದರೆ ಮಾನವುಳಿಯುವುದಿಲ್ಲ ನಗುಬಾಳಾಗುವುದು. ಇರುವನೊಬ್ಬ ಹುಡುಗ. ಸ್ವಲ್ಪ ವಿಜೃಂಭಣೆಯಿಂದ ಉಚಿತವಾಗಿಯೇ ಮಾಡಬೇಕು ನೋಡಿ.

ನಿನ್ನಮಾತು ನಿಜ ಲಗ್ನವೇನೋ ಆಗೀತು. ಆದರೆ ವಿಜೃಂಭಣೆಯೆಂಬ ನಿನ್ನ ಈಮಾತು ಮಾತ್ರ ಪ್ರತಿಬಂಧಕವಾಗಿದೆ. ನಾವೇನೂ ಯಾವುದನ್ನೂ ವಿಜೃಂಭಣೆಯಾಗಿ ಮಾಡಲಿಲ್ಲವೆ ? ಭ್ರಮರಾಂಬೆಯ ಲಗ್ನದಲ್ಲಿ ಎಷ್ಟು ವೆಚ್ಚವಾಯ್ತು ! ಈ ದುಷ್ಕಾಲದಲ್ಲಿ ಹಾಗೆಲ್ಲಾ ಸಾಧ್ಯವೆ ?

ಹೌದು. ನಿಜ. ಆಗ ಅಷ್ಟು ಅಟ್ಟಹಾಸದಿಂದಮಾಡಿ ಈಗ ಕಾರ್ಪಣ್ಯದಿಂದ ನಡೆಯಿಸಿದರೆ ನೆರೆಹೊರೆಯುವರು ಏನೆಂದಾರು ? ನಂಟರಿಷ್ಟರ ನಡುವೆ ನಾವು ತಲೆಯೆತ್ತಿಕೊಂಡಿರಬಹುದೆ ? ಹುಡುಗತಾನೆ ಏನುತಿಳಿದುಕೊಂಡಾನು! ಬುದ್ಧಿಬಂದವನು. ಕಡೆಗೆ ಒಂದುಸಾವಿರ ರೂಪಾಯಾದರೂ ಬೇಡವೆ ?

ಆ! ಒಂದುಸಾವಿರ ರೂಪಾಯಿ? ಸರಿಸರಿ. ಆದಿಕೊಳ್ಳುವವರೆಲ್ಲಾ ನಮ್ಮ ತೊಂದರೆಯನ್ನು ತೀರಿಸುತ್ತಾರೆಯೋ? ಬದುಕಿದರೆ ನೋಡಲಾರರು, ಕೆಟ್ಟರೆ ಕೈಹಿಡಿಯಲಾರರು. ಕೆಲವರು ಸ್ವಾರ್ಥಪರತೆಯಿಂದ ನಮ್ಮನ್ನು ಹೊಗಳಿ ಏನನ್ನಾದರೂ ಕಸಿದುಕೊಂಡು ಹೋಗುತ್ತಾರೆ. ಎತ್ತು ಹಾರುವುದಕ್ಕೆ ಮುಂಚೆ ಗೋಣಿ ಹಾರಿತು ಎಂಬಂತೆ ಇದೆಲ್ಲಾ ನಿಮ್ಮ ಹೊಗಸರ ಆವುಟಗಳೇ. ಸರಿ, ನಿನಗೆ ಮುದುಕಿಯ ಉಪದೇಶವೂ ಆಯ್ತೇ ಸರಿ! ಈಗ ಉಪನಯನಕ್ಕೇನು ಆತುರ?

ಇದೇಕೆ ಹೀಗಾಡುತ್ತೀರಿ? ಕಪಿಗೆ ಏಣಿಹಾಕಿಕೊಟ್ಟಂತೆಯೇ ಆಗುವುದು. ಮೊದಲೇ ಅವನಿಗೆ ಮುಂಜಿ ಬೇಕಿಲ್ಲ. ನೀವೂ ಹೀಗೆಂದರೆ ಮತ್ತೂ ಚೆನ್ನಾಯಿತು. ಬೇಕಾದ ಅಂಗಿಯನ್ನೋ ಟೋಪಿಯನ್ನೋ ಕೊಡಿಸಿ ಉಪಾಯಮಾಡಿ ಮುಂಜಿಗೆ ಒಪ್ಪಿಸಬೇಕು. ನೀವೇ ಹೀಗೆಂದರೆ ಯಾರೇನು ಮಾಡಿಯಾರು? ಆಗುವ ವೆಚ್ಚವು ಆಗಿಯೇ ತೀರಬೇಕು. ಮಕ್ಕಳುಮರಿಗಳಿರುವವರು ಮದುವೆಮುಂಜಿಗಳಿಗೆ ಹೆದರಿದರ ಆದೀತೆ?

ಸೀತಾಕಾಂತನಿಗೆ ವ್ಯಸನಕೋಪಪಶ್ಚಾತ್ತಾಪಗಳು ಏಕಕಾಲದಲ್ಲಿ ಬಂದೊದಗಿದವು. ಆದರೆ ಮೌನವ್ರತವೇ ಆಗ್ಗೆ ಮುಖ್ಯಕಾರ್ಯವೆಂದು ನಂಬಿದನು. ಹಾಗೆ ವ್ರತದಲ್ಲಿರುವವನ ಗೊಡವೆಗೆ ಹೋಗಲು ನಿರಾ, ದೇವಿಗೂ ಧೈರ್ಯಸಾಲಲಿಲ್ಲ. ಹೇಗೂ ಇಂದಿರೆಯೇನೋ ಈತನಿಗೆ ಸಿಟ್ಟು ಬಂದಿತೆಂದೇ ಭಾವಿಸಿ ಸುಮ್ಮನಾದಳು.

ಮರುದಿನ ಪ್ರಾತಃಕಾಲ ಸೀತಾಕಾಂತನು ಪದ್ಧತಿಯಂತೆ ಮನೆಗೆ ಪೂಜಾಪುಷ್ಪಗಳನ್ನು ತಂದನು. ಸ್ನಾನಾಹ್ನಿಕ ದೇವತಾರ್ಚನೆಗಳು ಆದುವು. ಇವನು ನಿತ್ಯವೂ ನಡುನಡುವೆ ಯಾವುದೊಂದು ಸಣ್ಣಪುಟ್ಟದನ್ನು ಅಣಿ ಮಾಡುವುದಕ್ಕೂ ಪತ್ನಿಯನ್ನು ಕರೆಯುತ್ತಿದ್ದನು. ಇಂದಾದರೋ ಆಕೆಯನ್ನು ಯಾವುದಕ್ಕೂ ಕರಿಯಲೇ ಇಲ್ಲ. ಇಂದಿರೆಯು ಮೇಧಾವಿನಿ ಆದರ ಕಾರಣವನ್ನು ಕೂಡಲೇ ಊಹಿಸಿದಳು. ಆತನು ಉಡುಪನ್ನು ಧರಿಸಿ ಹೊರಕ್ಕೆ ಹೊರಡಲು ಸನ್ನದ್ಧನಾದಾಗ ಪಕ್ಕಕ್ಕೆ ಸರಿದುನಿಂತು— ಫಲಾಹಾರಕ್ಕೆ ಮಾಡಿಟ್ಟದ್ದೇನೆಯಲ್ಲಾ! ಎಂದು ಮೃದುವಾಗಿಯೂ ಮಧುರವಾಗಿಯೂ ನುಡಿದಳು. ಸ್ವಭಾವಶಾಂತನೂ ಇಂಗಿತಜ್ಞನೂ ಆದ ಪತಿಯು

‘ ಊಂ ’ ಎಂದು ನಿಂತು ಸ್ವಲ್ಪಮಟ್ಟಿಗೆ ಉಪಹಾರವನ್ನು ಭುಜಿಸಿದನು. ಹೊರಡುವಾಗ—ಯಾರಾದರೂ ತಿಳಿದ ವೈದಿಕರಿಂದ ಒಂದು ಪಟ್ಟಿಯನ್ನು ಬರೆಸು—ಎಂದನು.



## ನಾಲ್ಕನೆಯ ಪ್ರಕರಣ.

ಯಾವ ಬಯಲಿನಲ್ಲಿ ನೋಡಿದರೂ ಪ್ರಾಕ್ಸುಮಂಗಲಿಯರು ಹಾಡುಗಳನ್ನು ಹೇಳಿಕೊಳ್ಳುತ್ತ ತುಂಬೆಯ ಹೂವನ್ನು ಬಿಡಿಸುತ್ತಿರುವರು. ಬಿಲ್ವಪತ್ರೆಯ ಮರಗಳಿಗಂತು ಉಳಿವುಬಾಳಿಲ್ಲ. ಎಲ್ಲರ ಮನೆಗಳಲ್ಲೂ ಅತಿಶಯವಾದ ಸಾರಣೆಕಾರಣೆಗಳು. ರಂಗವಲ್ಲಿಗಳು. ಶಿವದೇವಸ್ಥಾನಗಳಲ್ಲಾದರೊ ಮನೋಹರವಾದ ತೋರಣಗಳು ಫಲಪುಷ್ಪರಾಶಿಗಳು. ಬ್ರಾಹ್ಮಣರ ವೇದಘೋಷ. ಭಕ್ತಾದಿಗಳ ಓಡಾಟ. ಮಧ್ಯಾಹ್ನ ಹನ್ನೆರಡು ಘಂಟೆ ಆದರೂ ಯಾರಮನೆಯಲ್ಲೂ ಇನ್ನೂ ಅಡಿಗೆಗೆ ಯತ್ನವೇ ಇಲ್ಲ ಇಂದು ಕಾರ್ತೀಕ ಸೋಮವಾರ. ಹಳ್ಳಿಯ ಬ್ರಾಹ್ಮಣ್ಯದಲ್ಲಿ ಇನ್ನೂ ಪೂರ್ವಾಚಾರಗಳ ಕಟ್ಟು ಸಡಿಲಿರಲಿಲ್ಲ. ಅವರೆಲ್ಲರೂ ಕೇವಲ ಭಕ್ತಿಯಿಂದ ಶಿವಪೂಜೆಮಾಡಿ ನಕ್ತದ ಕಟ್ಟಳೆಯನ್ನು ಆಚರಿಸುತ್ತಿದ್ದರು.

ನಿತ್ಯಯಾತ್ರೆಯ ನರಹರಿಜೋಯಿಸನು ತನ್ನ ಕೆಲಸಗಳನ್ನೆಲ್ಲಾ ತೀರಿಸಿಕೊಂಡು ಮನೆಯಿಂದ ಹೊರಟನು ಇವನಿಗೆ ಜೋಯಿಸನೆಂಬ ಈ ನಾಮಧೇಯವು ಪಿತ್ರಾರ್ಜಿತವಾಗಿ ರೂಢವೇ ಹೊರತು ಯೌಗಿಕವಲ್ಲ. ಅನ್ನಸ್ವರವೇ ಅಕ್ಷರಸ್ವರಕ್ಕಿಂತ ಅತಿಶಯ. ಪುಣ್ಯಾಹ ಶ್ರಾದ್ಧಮಂತ್ರ ಇವುಗಳನ್ನು ಮಾತ್ರ ಸ್ವರವರ್ಣಲೋಪಸಹಿತವಾಗಿ ಗಂಗಾಪ್ರವಾಹದಂತೆ ಧಾರಾಳವಾಗಿ ಹೇಳುವ ಶಕ್ತಿಯುಂಟು. ನಡುವೆಯೇನಾದರೂ ತಪ್ಪಿದರೆ ಪುನಃ ಸಲಕ್ಷಣವಾಗಿ ಮೊದಲಿನಿಂದಲೇ ಪ್ರಾರಂಭಿಸಬೇಕು. ಸೀತಾಕಾಂತನ ಪುರೋಹಿನಾದ ಜಟಾವಲ್ಲಭನು ಈಗ ಕೇವಲ ಧನಿಕನಾಗಿ ಈ ಗೃಹಸ್ಥನಂತಹವರನ್ನು ಕೊಂಡುಕೊಳ್ಳುವ ಸ್ಥಿತಿಗೆ ಬಂದನು. ಮತ್ತು ಈ ಸುಂದರಗಿರಿಗೆ ಒಂದೊವರೆಗಾವುದ ದೂರದ ತಮ್ಮದೊಂದು ಜೋಡೀಗ್ರಾಮಕ್ಕೆ ಹೋಗಿ ನೆಲೆಗೊಂಡನು. ಆದುದರಿಂದ ಸೀತಾಕಾಂತನ ಮನೆಯ ಸಾಮಾನ್ಯವಾದ

ಶುಭಾಶುಭಕರ್ಮಗಳನ್ನೆಲ್ಲಾ ಈ ಜೋಯಿಸನೇ ವಸಿಷ್ಠಸ್ಥಾನದಲ್ಲಿ ನಿಂತು ನಡೆಯಿಸುತ್ತಿದ್ದನು.

ಪುರೋಹಿತರಿಂದ ಉಪನಯನದ ವೇಳ್ಯದಪಟ್ಟಿಯನ್ನು ಬರೆಯಿಸಬೇಕೆಂದು ಇಂದಿರೆಯು ಎಷ್ಟೋವೇಳೆ ಯತ್ನಿಸಿದಳು. ನಿತ್ಯವೂ ತನಗೆ ಅಡಿಗೆಯಕೆಲಸ, ಜೋಯಿಸನಿಗೆ ಅಕ್ಕಿಯ ಜಮಾಬಂದಿಯ ಆತುರ ಹೀಗೆ ಯಾರಿಗೂ ಅವಕಾಶವೇ ಇಲ್ಲ. ಇಂದುಮಾತ್ರ ಇಬ್ಬರಿಗೂ ಸ್ವಲ್ಪತೆರಪು ಜೋಯಿಸನು ಬಂದನು.

ಇಂದಿರೆ—ಏನು ಜೋಯಿಸರೆ, ಆಹೊತ್ತೇ ನಿಮ್ಮ ಸಂಗಡ ಹೇಳಿದ್ದೆನಲ್ಲಾ, ನನ್ನ ರಾಮಚಂದ್ರನ ಮುಂಜೆಗೆ ಒಂದು ಪಟ್ಟಿಯನ್ನು ತಯಾರು ಮಾಡಬೇಕು ಎಂದು. ಆದೇನು, ನಿಮ್ಮಕೈಯ್ಯಲ್ಲಾಗುವುದೊ ಅಥವಾ ಹಳ್ಳಿಯಿಂದ ದೊಡ್ಡಪುರೋಹಿತರನ್ನೇ ಕರೆಸಬೇಕೊ ?

ಜೋಯಿಸ—(ರೇಗಿ) ಅಮ್ಮ, ಯಾರೂ ಇಂತಹ ಮಾತನ್ನಾಡಿರಲಿಲ್ಲ ನಾನು ಇಂಥಾದ್ದನ್ನು ಎಷ್ಟು ಮಾಡಿಸಿಲ್ಲ ? ಈ ಮಹಾಪಟ್ಟಿಗೆ ಅವನನ್ನು ಕರೆಯಿಸುವಿರೊ ? ಅವನಿಗೇನು ತಿಳಿಯುವುದು ! ಅನುಮುನ್ನೂರುಗಾಲ ನಿತ್ಯವೂ ನಿಮ್ಮ ಮನೆಯ ಹೊಸ್ತಿಲನ್ನುಮೆಟ್ಟಿ ತುಳಿಯುತ್ತ ನಿಮ್ಮ ಕಷ್ಟ ಸುಖಗಳಿಗೆ ಆಗುವವನು ನಾನು, ಈ ಫಲಗಾಲಕ್ಕೆ ಅವನೊ ? ಚೆನ್ನಾಯಿತು ತಮ್ಮ, ಇದೊ, ತೆಗೆದುಕೊಳ್ಳಿ. ಎಂತಹ ಪಟ್ಟಿಬೇಕು. ಭರ್ಜರಿ ಪಟ್ಟಿಯನ್ನು ಕೊಡುತ್ತೇನೆ. ನೋಡಿರಮ್ಮ.

ಇಂದಿರೆ—ಜೋಯಿಸರೆ, ಸಿಟ್ಟೇಕೆ ? ಇಂದೇಲಗ್ನವಲ್ಲ. ಸುಮ್ಮನೆ ವೇಳ್ಯದ ಪಟ್ಟಿಯನ್ನು ಗುರುತುಮಾತ್ರಹಾಕುವುದು. ಈಗ ನಿಮಗೆ ಅವಕಾಶ ವಿದ್ದರೆ ಆಗಬಹುದು. ಮುಂದಣಮಾತು ಹಾಗಿರಲಿ—ಎಂದು ಸೌಮ್ಯವಾಗಿ ಹೇಳಿ ಸಮಾಧಾನಮಾಡಿದಳು.

ಜೋಯಿಸ—ಅಮ್ಮ, ಒಂದು ತೆಂಗಿನಕಾಯಿ, ಎರಡು ಬಾಳೆಯ ಹಣ್ಣು, ದಕ್ಷಿಣೆ, ಮಂತ್ರಾಕ್ಷತೆ, ಇತರ ಪೂಜಾದ್ರವ್ಯಗಳು, ಕಾಗದ ಶಾಯಿ, ಲೇಖಿನಿ, ಇವುಗಳನ್ನು ತೆಗೆದುಕೊಂಡುಬನ್ನಿ.

ಇಂದಿರೆಯು ಸ್ವಭಾವತಃ ಭಕ್ತಿಪರಾಯಣೆ ಈಗಲಂತು ಪ್ರಿಯಪುತ್ರನ ಉಪನಯನವೆಂಬ ಹೆಚ್ಚುಸಡಗರ. ಎಲ್ಲವನ್ನೂ ತಂದು ಜೋಯಿಸನ

ಮುಂದಿಟ್ಟಳು. ಜೋಯಿಸನು ಕಾಗದದಮೇಲೆ ಶ್ರೀಕಾರವನ್ನು ಬರೆದು ಆ ಪತ್ರದ ಅಷ್ಟದಿಕ್ಕುಗಳಿಗೂ ಕುಂಕುಮವನ್ನೂ ತುಪ್ಪವನ್ನೂ ಕಲಸಿ ಬಳಿದನು. ಬಳಿಕ ಪಟ್ಟಿಯ ಬರೆವಣಿಗೆಗೆ ಪ್ರಾರಂಭ.

ಒಂದನೆಯದಾಗಿ—ಮನೆದೇವರ ಸೀರೆ ೫೦ ರೂಪಾಯಿ. ತಾಳಿ ಒಂದು ವರಹಾತೂಕದ್ದು. ವಟುವಿಗೆ ಸುವರ್ಣಯಜ್ಞೋಪವೀತ ೫ ವರಹಾ ತೂಕದ್ದು. ಭಿಕ್ಷದ ಬಟ್ಟಲು ೩ಕ್ಕೆ ೬ಸೇರುಬೆಳ್ಳಿ. ದೀಕ್ಷಾವಸ್ತ್ರಕ್ಕೆ ಕಲಾಪತ್ತಿನ ಪಂಚೆಗಳು ಜತೆ ಎರಡಕ್ಕೆ ಸುಮಾರು ೬೦ ರೂಪಾಯಿ. ಪಾದಪೂಜೆಗೆ ಸೀರೆಧೋತ್ರಗಳು. ಬ್ರಹ್ಮೋಪದೇಶಕ್ಕೆ ಕಾಶಿಯ ಪೀತಾಂಬರ ಅಥವಾ ಕಾಶ್ಮೀರದ ಶಾಲುವಿಗೆ ೬೦ ರೂಪಾಯಿ, ಬಂಧು ಮಿತ್ರರಿಗೆ ಬೇಕಾಗುವ ಜವಳಿ, ಭಾಪಿಂಗ, ಮತ್ತು ಯಾಜ್ಞಿಕಕ್ಕೆ ತಕ್ಕಸಾಮಾನುಗಳು, ಅಂದರೆ ಅಕ್ಕಿ, ತೆಂಗಿನಕಾಯಿ, ಬಾಳೆಯಹಣ್ಣು, ಬೆಲ್ಲ ಮೊದಲಾದುವು. ಪೌರೋಹಿತಸ್ವಾಮ್ಯ. ನವಗ್ರಹದ ದಕ್ಷಿಣೆ. ಯಜ್ಞೋಪವೀತದಾನದ ದಕ್ಷಿಣೆ, ಕೃಛ್ರದದಕ್ಷಿಣೆ. ಮಠದ ದಕ್ಷಿಣೆ. ಫಲತಾಂಬೂಲ.

ಎರಡನೆಯದಾಗಿ—ಓಲಗದವರು, ಮಡಿವಳರು, ಸ್ತಂಭಬಲಿಯದಿನ ರಾತ್ರಿ ವಟುವನ್ನು ಅಶ್ವತ್ಥವೃಕ್ಷದಬಳಿಗೆ ದಾಟುಕರೆದುಕೊಂಡುಹೋಗುವ ಮೆರೆವಣಿಗೆಯಲ್ಲಿ ಕುದುರೆಸಾರೋಟು, ಗ್ಯಾಸ್‌ಲೈಟ್‌ದೀಪ, ಆರತಿಯವೆಚ್ಚ, ಮಾರ್ಗದಲ್ಲಿ ಕಂಡಕಂಡವರಿಗೆಲ್ಲಾ ಫಲಪುಷ್ಪತಾಂಬೂಲಗಳನ್ನು ಹಂಚುವುದು, ಇಡಿಗಾಯಿ ಒಡೆಯುವುದು, ವಟುವಿಗೆ ಕಾಲ್ತೊಳೆದ ಅಕ್ಕತಂಗಿಯರಿಗೆ ರತ್ನಾಭರಣಗಳನ್ನೂ ಪಟ್ಟವಾಳಿಯನ್ನೂ ಓದಿಸುವುದು, ಬಾಣಬಿರುಸು

ಮೂರನೆಯದಾಗಿ—ಗೋಧಿಕಲ್ಲುಶಾಸ್ತ್ರ, ಲಗ್ನಪತ್ರಿಕೆಯನ್ನು ಚಿನ್ನದ ಕ್ಷರದಲ್ಲಿ ಅಚ್ಚುಹಾಕಿಸುವುದು, ಎಣ್ಣೆಅರಿಸಿನಾ ಬೀರುವುದು, ಸುವಾಸಿನೀ ಪೂಜೆ, ದೇವರಸಮಾರಾಧನೆ, ನಾಲ್ಕೈದುದಿನ ನಿತ್ಯವೂ ಎರಡುವೇಳೆ ಊರಿಗೆಲ್ಲಾ ಬ್ರಾಹ್ಮಣಸಂತರ್ಪಣೆ, ದೊಡ್ಡಮನುಷ್ಯರಾದ ಅತಿಥಿಗಳಿಗೂ ಬಂಧುಗಳಿಗೂ ಉಪ್ಪಿಟ್ಟು ಕಾಫಿ ಮೊದಲಾದ ಬಗೆಬಗೆಯ ತಿಂಡಿತೀರ್ಥಗಳು, ಅತಿಶಯವಾಗಿ ಮಾಡಿಸುವ ಮಂಡಿಗೆ ಚಿರೋಟಿ ಫೇಣಿ ಇಂತಹ ಭಕ್ಷ್ಯಗಳಿಗೆ ತಗಲುವವೆಚ್ಚ.

ನಾಲ್ಕನೆಯದಾಗಿ—ಭಿಕ್ಷಕ್ಕೂ ಬಾಗಿನಗಳಿಗೂ ಇಡುವ ಉಂಡೆಗಳು,

ಭಕ್ಷ್ಯಗಳು, ಹಣ್ಣುಹಂಪಲುಗಳು, ವಟುವಿಗೆ ನಿತ್ಯದ ಆಹ್ನಿಕಕ್ಕೆ ಬೇಕಾಗುವ ಬೆಳ್ಳಿಯ ಪಂಚಪಾತ್ರೆ, ಉದ್ಧರಣೆ, ಅರ್ಘ್ಯಪಾತ್ರೆ, ಚಂಬು ಮೊದಲಾದವುಗಳಿಗೆ ತಗಲುವವೆಚ್ಚ

ಐದನೆಯದಾಗಿ—ಮುಹೂರ್ತಕ್ಕೆ ಬಂದ ಸಮಸ್ತ ಬಂಧುಗಳು, ಮುಯ್ಯಿ ಓದಿಸಿದವರು ಮೊದಲಾದವರಿಗೆಲ್ಲಾ ಬಂಡಿಯಬಾಡಿಗೆ, ಉಡುಗೊರೆಗಳು, ಜಕ್ಕುಲಿಯಹಿಟ್ಟು, ಪುಳ್ಳಂಗಾಯಿ, ಅರಿಸಿನಕುಂಕುಮ, ಮೊದಲಾದುವುಗಳನ್ನು ಹಂಚುವುದು, ಪುರೋಹಿತರನ್ನೂ ಸಭಾಮುದ್ರೆಯನ್ನೂ ಸನ್ಮಾನಿಸುವುದು.

ಇದಲ್ಲದೆ ಮನೆಯನ್ನು ಸುಣ್ಣಬಣ್ಣಗಳಿಂದ ಅಲಂಕರಿಸುವುದು, ಚಪ್ಪರ, ಆಳುಕಾಳುಗಳು, ಅಡಿಗಬ್ಬ ಮೊದಲಾದುವುಗಳಿಗೂ ವೆಚ್ಚವಾಗಬೇಕು.

ಈ ಪಟ್ಟಿಯನ್ನೆಲ್ಲಾ ನರಹರಿಜೋಯಿಸನು ಪರೀಕ್ಷೆಗೆ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳು ಬರಯುವುದಕ್ಕಿಂತಲೂ ತ್ವರೆಯಾಗಿ ಸಂಭ್ರಮದಿಂದ ಬರೆದುದನ್ನೇ ನೋಡಿದರೆ ಇಂತಹ ವಿಷಯಗಳಲ್ಲಿ ಈತನು ಎಷ್ಟು ದಕ್ಷನು ಎಂದು ಮಿತವಿಚಾರಿ ಸಂತೋಷಿಸುವಂತಾಗುವುದು. ಪಟ್ಟಿಯನ್ನು ಓದಿದುದೂ ಆಯಿತು

ಇಂದಿರೆ - ಏನು ಜೋಯಿಸರೇ, ನೀವೇನು ದೊರೆಗಳೆಂದು ತಿಳಿದಿದ್ದೀರಾ! ನಮ್ಮಂತಹವರು ಈ ಪಟ್ಟಿಯಂತೆ ನಡೆಯಿಸಲಾಗುವುದೆ ?

ಜೋಯಿಸ—ತಾಯಿ, ನಮಗೆ ನೀವೇ ದೊರೆಗಳು. ಕಾಲಸ್ಥಿತಿಯು ಬಹಳ ನಾಜೋಕೆಂದೇ ಎಲ್ಲವನ್ನೂ ಹ್ರಸ್ವಮಾಡಿ ಹೀಗೆ ಬರೆದಿದ್ದೇನೆ. ದೊರೆಗಳಿಗಾದರೇನೆ ! ಆರೀತಿಯೇ ಬೇರೆ

ಇಂದಿರೆ— (ಬೆರಗಾಗಿ ಬಲಗೈಯಿಂದ ಬಾಯನ್ನು ಮುಚ್ಚಿಕೊಂಡು) ಇದೇನಿರಪ್ಪ, ೫೯ ವರಹಾತೂಕದ ಚಿನ್ನದ ಜನಿವಾರವೆ ?

ಜೋಯಿಸ—ಅಮ್ಮ, ನೋಡಿದಿರೋ ? ಮಾರಿಯಕಣ್ಣು ಹೋತನ ಮೇಲೆ. ಪುರೋಹಿತನಿಗೇನಾದರೂ ಕೊಡಬೇಕೆಂದರೆ ನಿಮಗೆ ಹೊಟ್ಟೆಯುರಿಯಮ್ಮ. ಎಲ್ಲಾ ನಮ್ಮ ವೈದೀಕರಿಗೇ ಹೊಸೆದುಕೊಳ್ಳುತ್ತಾರೆ.—ಎಂದು ರೇಗಿ ಪಟ್ಟಿಯನ್ನೆತ್ತಿ ಕುಕ್ಕಿದನು.

ಮೌನದಿಂದ ಮೂಲೆಯಲ್ಲಿ ಕುಳಿತು ಇದನ್ನೆಲ್ಲಾ ನೋಡುತಿದ್ದ ಅನ್ನ ಪೂರ್ಣಾದೇವಿಯು ತನ್ನ ಊರೆಗೋಲನ್ನು ಎತ್ತಿ ಹಿಡಿದು ತೋರಿಸುತ್ತ—ಆ! ಏನಯ್ಯ ಬ್ರಾಹ್ಮಣ, ಯಾರಯ್ಯ ಮಾರಿ ? ತಿರುಪದ ಅಕ್ಕಿ ಹೆಚ್ಚಾಯ್ತೊ ? ನಿನಗೇನು ಬುದ್ಧಿಗಿದ್ಧಿಯಿದೆಯೋ ಇಲ್ಲವೋ ? ಜ್ಞಾನಗೆಟ್ಟಿದ್ದೀಯೋ ? ಎಂದು ಗರ್ಜಿಸಿದಳು.

ಇಂದಿರೆಯು ತಾಯನ್ನು ಸಂತೈಸಿ—'ಅಮ್ಮ, ಸುಮ್ಮನಿರು, ಅವರವರ ಪಾಪ ಅವರವರದು. ಏನೋ ! ಅರಿಯದ ಬ್ರಾಹ್ಮಣರು. ಒರಟುತನ. ಹೋಗಲಿ ಬಿಡಮ್ಮ' ಎಂದಳು. ಒಳಕ್ಕೆ ಹೋಗಿ ಪುನಃ ಒಂದು ತಟ್ಟೆಯಲ್ಲಿ ತಾಂಬೂಲವನ್ನೂ ಒಂದುಪಾವಲೆ ದಕ್ಷಿಣೆಯನ್ನೂ ತಂದಿಟ್ಟಳು. ಜೋಯಿ ಸನು ತನ್ನ ದುಡುಕಿಗೆ ಪೆಚ್ಚುಬಿದ್ದಿದ್ದನು. ಆದರೂ ಬೆಳ್ಳಿಯನಾಣ್ಯದ ಭೇಟಿಯಾದಕೂಡಲೆ ಮುಖದಲ್ಲಿ ಕಳೆಯೇರಿತು. ಪಟ್ಟಿಗೆ ಪೂಜೆಮಾಡಿ ಎಲ್ಲವನ್ನೂ ಗಂಟುಕಟ್ಟಿಕೊಂಡು—ಅಮ್ಮ, ಬಡವ. ಕರುಣವಿರಬೇಕಮ್ಮ. ಮುಖ್ಯವಾಗಿ ನಾವು ಗೊಡ್ಡುವೈದೀಕರು. ಉಪನಯನಲಗ್ನವು ಎಂದಮ್ಮ? ಮೊದಲೇ ತಿಳಿದಿದ್ದರೆ ಮಾಡಿಸುವುದಕ್ಕೆ ಯಾರನ್ನಾದರೂ ಏರ್ಪಾಡು ಮಾಡಿ ರುತ್ತೇನೆ ಅಗ್ರಹಾರದ ಉಪಾಧ್ಯರನ್ನು ಕರೆದರೆ ಬಂದುದರಲ್ಲಿ ಅರ್ಧ ಕೊಡಬೇಕೆಂದು ಕೇಳುತ್ತಾರ. ಅದಕ್ಕೋಸ್ಕರ ಹೇಳಿದೆನಮ್ಮ—ಎಂದನು.

ಇಂದಿರ—ಕ್ರಮೇಣ ಗೊತ್ತಾಗುವುದು.

ಜೋಯಿಸ—ಅಜ್ಜಿ, ಹೋಗಿಬರುತ್ತೇನೆ ಕೋಪಿಸಿಕೊಳ್ಳಕೂಡದು.

ಅನ್ನಪೂರ್ಣೆ—ಹೋಗೋ, ಉಪಾದಾನದೋನೆ !



## ಐದನೆಯ ಪ್ರಕರಣ.

ಪಟ್ಟಿಯೇನೋ ತಯಾರಾಯಿತು. ಇಂದಿರೆಯು ಬಲುಜಾಣೆ. ಪತಿಯ ಮನಸ್ಸು ಸುಸಮಾಹಿತವಾಗುವ ಕಾಲವನ್ನು ನಿರೀಕ್ಷಿಸುತ್ತಿದ್ದಳು. ಇದ ರಿಂದ ಒಂದೆರಡು ವಾರಗಳವರೆಗೂ ಪಟ್ಟಿಯು ಸೀತಾಕಾಂತನ ಕೈಗೆ ಸೇರ ಲಿಲ್ಲ. ಒಂದುದಿನ ಪತಿಯು ವಿನೋದವಾಗಿ ಮಾತಾಡುತಿದ್ದನು. ಆಗ ಇಂದಿರೆಯು ಪಟ್ಟಿಯನ್ನೂ ಕನ್ನಡಕದ ಪೆಟ್ಟಿಗೆಯನ್ನೂ ತಂದು ಪತಿಯ

ಮುಂದಿಟ್ಟಳು. ಈತನು ಪತ್ರಿಯ ಗಾಂಭೀರ್ಯಕ್ಕೆ ಮೆಚ್ಚಿದನು. ಮಾತಾಡದೆ ಸಂತೋಷದಿಂದ ಅದನ್ನು ತೆಗೆದುಕೊಂಡು ಕಣ್ಣಿಂದಲೇ ಓದಿಕೊಂಡನು. ಹರ್ಷವಿಷಾದಗಳೆರಡೂ ಏಕಕಾಲದಲ್ಲಿ ಅಂಕುರಿಸಿದವು. ಆದರೂ ಮುಖಮುದ್ರೆಯಲ್ಲಿನೋ ಪ್ರಕಟವಾಗಲಿಲ್ಲ. ಇಂದಿರೆಯು ಏನೋ ಮನೆಗೆಲಸಗಳ ಸಡಗರದಲ್ಲಿರುವಂತೆ ತೋರ್ಪಡಿಸಿಕೊಂಡಳು. ಆಕೆಯ ಮನಸ್ಸು ಕಟಾಕ್ಷಗಳುಮಾತ್ರ ಈತನಕಡೆಯೇ. ಆದರೆ ಯಾವ ಉತ್ತರವೂ, ಕಡೆಗೆ ಸೂಚನೆಯೂ ಕೂಡ ತಿಳಿಯಲಿಲ್ಲ ದೀಪಕ್ಕೆದುರಾಗಿ ಸ್ತಂಭದ ಬಳಿಯಲ್ಲಿ ನಿಂತಳು. ಪತಿಯ ಮುಖಾವಲೋಕನಮಾಡುತ್ತ ಬಂದಳು. ಈಗ ಏನಾದರೂ ಉತ್ತರವು ಹೊರಡಲೇಬೇಕಾಯ್ತು.

ಸೀತಾಕಾಂತ—ಏನು? ಈ ಪಟ್ಟಿಯಿಂದ ನಮ್ಮ ಹಿಂದಿನ ಸ್ಥಿತಿಯೆಲ್ಲಾ ನೆನಪಾಗುತ್ತದೆ. ಇದರಲ್ಲಿ ತೋರಿಸಿರುವಂತೆ ಊರಿನ ಬ್ರಾಹ್ಮಣರುಗೆಲ್ಲಾ ನಾಲ್ಕೈದುದಿನವೂ ಎರಡು ವೇಳೆಗಳಲ್ಲೂ ಸಂತರ್ಪಣೆಯೆ! ಕಾಲಸ್ಥಿತಿಯು ಹೀಗಿರುವುದಲ್ಲಾ! ಖರ್ಚುವೆಚ್ಚಗಳು ಮಿತಿಮೀರುವುವಲ್ಲವೆ? ಬಂದಬಂದವರನ್ನೆಲ್ಲಾ ಸುದಾರಿಸುವವರು ಯಾರು? ಅವರ ಆಕ್ಷೇಪಣೆಗಳನ್ನು ತಡೆದುಕೊಳ್ಳುವ ಬಗೆ ಹೇಗೆ?

ಇಂದಿರ—ಇದೇನು! ಹೀಗೆನ್ನುವಿರಿ? ಮುಖ್ಯವಾಗಿ ಅನ್ನಶಾಂತಿಯಾಗಬೇಡವೆ? ಸಾವಿರಾರು ಪ್ರಾಣಿಗಳು ಮನದಣಿಯುವಂತೆ ಉಂಡುಉಟ್ಟು ತಿರುಗುತ್ತಿರುವ ನಮ್ಮ ಮಗುವನ್ನು ಹರಸಬೇಡವೆ? ಇದೇನೂ ಬಾಧಕವಲ್ಲ ನಮ್ಮ ಪುರೋಹಿತರು ಹಳ್ಳಿಯನ್ನು ಸೇರಿಕೊಂಡರು. ಈಗ ಸದ್ಯಕ್ಕೆ ಚಿಲ್ಲರೆ ಕೆಲಸಗಳನ್ನು ನಡೆಸುತ್ತಿರುವ ಶುಕ್ಲವೃತ್ತಿಯ ನರಹರಿಜೋಯಿಸನಿಗೇ ಈ ಹಕ್ಕು ಸೇರಬೇಕೋ? ಈತನೇ ಈ ಪಟ್ಟಿಯನ್ನು ತಯಾರುಮಾಡಿಕೊಟ್ಟವರು. ಈತನಿಗೆ ಮಂತ್ರವೇ ಅಧೀನವಿಲ್ಲ ಮಾಡಿಸುವುದಕ್ಕೆ ಇನ್ನಾರನ್ನಾದರೂ ಕರೆದುಕೊಂಡು ಬರುವರಂತೆ! ಚಿನ್ನ ಬೆಳ್ಳಿಯ ಸಾಮಾನು, ವಸ್ತ್ರಪಾತ್ರೆಗಳು, ಹಕ್ಕುದಾರಿಯ ಪುರೋಹಿತರಿಗೂ ಇಲ್ಲವಂತೆ. ಎಲ್ಲೋ ನಿನ್ನೆಮೊನ್ನೆ ಬಂದ ಈ ದಡ್ಡಬ್ರಾಹ್ಮಣನಿಗೇ ಸಲ್ಲಬೇಕಂತೆ. ನೋಡಿದಿರಾ ಈತನ ಆಶೆ!

ಸೀತಾಕಾಂತ—ಅದು ಹಾಗಿರಲಿ. ಸಮಾರಾಧನೆಯ ಮಾತನ್ನು

ಹೇಳು. ಈವೂರಿನವರೆಲ್ಲಾ ಒಂದು ಎರಡುಹೊತ್ತೂ ಉಂಡುತಿಂದು ತೇಗಿ ಹೋಗುವುದರಿಂದ ನಮಗೇನೋ ಹೆಚ್ಚು ವೆಚ್ಚ. ಆದರೆ ಯಾರಿಗೂ ಏನೂ ಅಂತಹ ದೊಡ್ಡ ಸಹಾಯವಾಗದು. ಔತಣದಲ್ಲಿ ಉಂಡು ಬಾಗಿನ ದಲ್ಲಿ ಬದುಕಿದವರು ಯಾರುಂಟು ! ಪೌರೋಹಿತ್ಯದ ಸ್ವತ್ತಿನ ವಿಷಯದಲ್ಲಿ ನನ್ನ ಆಕ್ಷೇಪಣೆಯೇನೂ ಇಲ್ಲ. ನಾವು ಕೊಡುವುದನ್ನು ಕೊಟ್ಟುಬಿಟ್ಟ ರಾಯಿತು. ಬಳಿಕ ಅದು ಯಾರಿಗೆ ಸೇರಿದರೆತಾನೆ ನಮಗೇನು ? ಒಂದು ವಿಧದಲ್ಲಿ ನೋಡಿದರ ನರಸಿಂಹಜೋಯಿಸರಿಗೆ ಸೇರುವುದೇ ಮೇಲು. ಆತನು ಬಡವ. ಏನಾದರೂ ಯತ್ಕಿಂಚಿತ್ ಸಹಾಯವಾದೀತು.

ಇಂದಿರೆ—ಅದುಸರಿ ಆದರೆ ಆತನು ದುರುಳ. ಜಗಳಗಂಟಿಗ. ಹತ್ತುಜನ ಸೇರಿದಾಗ ಮಾತುಮಾತಿಗೂ ಆತನಸಂಗಡ ಜಗಳವಾಡುವವರು ಯಾರು ?

ಸೀತಾಕಾಂತ—ಒಟ್ಟು ಎಷ್ಟು ವೆಚ್ಚವಾಗುವುದು ಬಲ್ಲೆಯಾ ?

ಇಂದಿರೆ—ನನಗೇನು ಗೊತ್ತು ? ಹೆಣ್ಣುಹೆಂಗಸು ಏನಾದರೂ ಆಗಲಿ. ಇಷ್ಟಕ್ಕೂ ಕಡಿಮೆಯಾದರೆ ನಮ್ಮ ಮಾನಕ್ಕೆ ತಡೆದೀತೆ ? ಅತ್ತೆಮ್ಮ ನವರು ಹೇಳುತ್ತಿದ್ದುದನ್ನು ಕೇಳಿದ್ದರ ನೀವು ಇನ್ನೂ ಏನೆನ್ನುತ್ತಿದ್ದಿರೊ !

ಸೀತಾಕಾಂತ—ಅನ್ನುವುದೇನು ? ನನ್ನ ಉಪನಯನದಲ್ಲಿ ಇದರ ನಾಲ್ಕರಷ್ಟು ವೆಚ್ಚ. ನಾನೂ ಅಲ್ಪಸ್ವಲ್ಪ ಬಲ್ಲೆ. ಅಮ್ಮನೂ ಹೇಳುತ್ತಿದ್ದಳು. ಆದರೆ ಕಾಲಸ್ಥಿತಿಯೂ ನಮ್ಮ ಸ್ಥಿತಿಯೂ ಬದಲಾಯಿಸಿವೆ. ಆಗಲಿ ನೋಡೋಣ. ಇಷ್ಟಕ್ಕೂ ಮಾಘಾದಿಪಂಚಕದಲ್ಲಿತಾನೆ ಲಗ್ನ ? ನಾಳೆ ಕ್ರಿಸ್‌ಮಿಸ್ ರಜಾದಲ್ಲಿ ಮಗುವೂ ಇಲ್ಲಿಗೆ ಬರುವನು. ನನ್ನ ಆಪ್ತಮಿತ್ರ ನೂ ಬರುವನು. ಆಗ್ಗೆ ಎಲ್ಲವನ್ನೂ ನಿಶ್ಚಯಿಸೋಣ.

ನಿರ್ಮಲವಾದ ನೀಲಾಕಾಶ. ಎಲ್ಲೆಲ್ಲೂ ರೈತರಿಗೂ ಹಕ್ಕಿಪಕ್ಷಿಗಳಿಗೂ ಕಾಳುಕಡ್ಡಿಗಳನ್ನು ಸಂಗ್ರಹಿಸುವ ಸಡಗರ. ಬಿಸಿಯೂಟ, ಕರಿಯಕಂಬಳಿ. ಬೆಂಕಿಯಶಾಖ ಇವಕ್ಕೆ ಹೆಚ್ಚು ಪ್ರಾಶಸ್ತ್ಯ. ಗಗನದಲ್ಲೆಲ್ಲೂ ಮೋಡವಿಲ್ಲ. ಜನರ ಚುಟ್ಟಾಗಳಿಂದಲೂ ಪ್ರಾಣಿಗಳ ಮೂಗುಬಾಯಿಗಳಿಂದಲೂ ಸಣ್ಣ ಪುಟ್ಟಮೋಡಗಳು ಹೊರಡುವಕಾಲ.

ಮಗನು ಊರಿಗೆಬರುವ ಸಂಭ್ರಮ. ಹಪ್ಪಳ, ಸಂಡಿಗೆ ಒಗೆ

ಬಗೆಯ ಉಪ್ಪಿನಕಾಯಿ ಸಿದ್ಧವಾಗಿವೆ. ದಿನಬೆಳಗಾದರೆ ಅನ್ನಪೂರ್ಣೆಯು 'ಮಗು ಎಂದು ಬರುತ್ತಾನೆ?' ಎಂದು ಕೇಳುತ್ತಲೇ ಇದ್ದಾಳೆ. ಪ್ರಿಯ ಪುತ್ರನನ್ನು ಬಿಟ್ಟು ಭುಜಿಸುವುದಕ್ಕೆ ಮನಸ್ಸಾಗದೆ ಹಸಿಯವರೆಯಕಾಯನ್ನು ಕೂಡ ಇನ್ನೂ ಮನೆಗೆ ಒಂದುದಿನವೂ ತಂದಿಲ್ಲ ಹೀಗೆ ಚಿರಕಾಲ ನಿರೀಕ್ಷಿತವಾದ ಪುತ್ರಾಗಮನವು ಕಡೆಗೆ ಸನ್ನಿಹಿತು. ರಾಮಚಂದ್ರನು ತಂಗಿಯ ಆಟಕ್ಕೆ ಬಣ್ಣದ ಗಿಳಿಕೆ, ಕೊಬ್ಬರಿ ಮಿಠಾಯಿ, ಸಿಹಿಬಿಲ್ಲೆಗಳು, ಮುದುಕಿಯ ಬಾಯಿಗೆ ಮೆತ್ತಗಿರುವ ಪೆಂಡಖರ್ಜೂರ, ತಾಯ್ತಂದೆಗಳಿಗೆ ತಾಮ್ರದ ತಂಬಿಗೆಗಳಂತಿದ್ದ ಶ್ರೇಷ್ಠವಾದ ನಾಲ್ಕು ದಾಳಿಂಬದ ಹಣ್ಣುಗಳು ಇಷ್ಟನ್ನೂ ತಂದನು. ಇಂದು ಮನೆಯವರಿಗೆ ಮಾತ್ರವಲ್ಲ, ಆ ಒಟ್ಟು ಬೀದಿಗೇ ಎಷ್ಟೋ ಸಂತೋಷ. ರಾಮಚಂದ್ರನು ಅಷ್ಟುಜನಮೆಚ್ಚುಗೆಯ ಬಾಲಕನು. ಇವನು ತನ್ನ ಸಂಗಾತಿಗಳಲ್ಲಿ ಕೆಲವರಿಗೆ ಆಟದ ಸಾಮಾನುಗಳನ್ನು ತಂದಿರುವನು. ಈ ಹುಡುಗನು ಈಗ ನಿತ್ಯವೂ ಆಟಪಾಟಗಳು, ಕಥೆಯ ಪುಸ್ತಕಗಳನ್ನೋದುವುದು ಹೀಗೆ ಸುಖವಾಗಿ ಕಾಲಕ್ಷೇಪಮಾಡುತ್ತಿದ್ದನು

ಒಂದುದಿನ ತಾಯಿ ಮಗನನ್ನು ಕುರಿತು—ಮಗು, ನಾಳೆ ಚೈತ್ರ ಮಾಸದಲ್ಲಿ ನಿನಗೆ ಮುಂಜಿಮಾಡಬೇಕೆಂದು ಯೋಚಿಸಿದ್ದಾರಪ್ಪ

ರಾಮು—ಇದೇನಮ್ಮ, ಇಷ್ಟುಬೇಗ! ಏನು, ನಾನು ಈಗಲೇ ವಿಭೂತಿ ರುದ್ರಾಕ್ಷಿಗಳ ವಸಿಷ್ಠನಾಗಬೇಕೆ? ಹಾಗಾದರೆ ಓದಿ ಉದ್ಧಾರವಾದಂತೆಯೇ!

ಇಂದಿರೆ—ಏಕಪ್ಪ ಹೀಗೆನ್ನುತ್ತಿ! ಎಂಟು ವಯಸ್ಸಿಗೇ ಆಗತಕ್ಕದ್ದು ಏನೋ ನಿಂತುಬಂದಿತು, ಇನ್ನು ತಡಮಾಡುವುದಕ್ಕಾದೀತೆ? ನಿನಗಿಂತಲೂ ಚಿಕ್ಕವಯಸ್ಸಿನವನಾದ ಶಾಮಭಟ್ಟರಮಗನನ್ನು ನೋಡು. ಆಗಲೇ ಎಷ್ಟು ಮುದ್ದಾಗಿ ದೇವರಪೂಜೆಮಾಡುತ್ತಾನೆ!

ರಾಮು—ಅಮ್ಮ, ಸಾಕು ನಿಲ್ಲಿಸು. ಇದನ್ನು ಕೇಳಿದರೆ ನನಗೆ ಹೊಂಗೆ ಯೆಣ್ಣೆ ಕುಡಿದಂತಾಗುವುದು.

ಅನ್ನಪೂರ್ಣೆ—ಇಂದಿರಾ, ನೋಡಿದೆಯೊ? ನಾನು ಹೇಳಿರಲಿಲ್ಲವೆ? ಈಗಿನಕಾಲದ ಹುಡುಗರಮ್ಮ, ತಲೆಹೋಕರು. ಮುಖ್ಯವಾಗಿ ನೀವು ಇಬ್ಲೀಷು ಓದುವುದಕ್ಕೆಹಾಕಿ ಮಗುವಿನ ತಲೆಯಮೇಲೆ ಕಲ್ಲುಹಾಕಿದಿರಿ. ಅನುಭವಿಸಿರಮ್ಮ ಈಗ.

ರಾಮಚಂದ್ರನು ಥಕ್ಕನೆ ನಕ್ಕು ಹೊರಡಲುದ್ಯುಕ್ತನಾದನು. ಇಂದಿರೆಯು ಸಂತೈಸಿ ತಡೆದಳು.

ರಾಮಚಂದ್ರ—ಅಮ್ಮ, ನೀವು ಹಳೇಕಂದಾಚಾರದ ಮಾತುಗಳನ್ನೇ ಆಡುತ್ತೀರಿ. ನಿಮಗೇನೂ ತಿಳಿಯುವುದಿಲ್ಲ. ಈಗ ಮುಂಜಿಗೇನಾತುರ ? ನೋಡು, ನರಸಿಂಹೈಂಗಾರ್ರ ಮಗನಿಗೆ ಬಿ.ಎ. ಆದಮೇಲೆ ಇಪ್ಪತ್ತನೆಯ ವಯಸ್ಸಿನಲ್ಲಿ ದೇವಸ್ಥಾನದಲ್ಲಿ ಮುಂಜಿಯಾಯ್ತು. ಅದನ್ನು ನಾನು ಕಣ್ಣಾರ ನೋಡಿದ್ದೇನೆ. ನಾನಿನ್ನೂ ಸ್ಕೂಲ್‌ಫೈನಲ್ ಪ್ಯಾಸ್ ಮಾಡಿಲ್ಲ. ಈಗಲೇ ಮುಂಜಿಯೆ ? ಆಹಾ ! ನಮ್ಮ ಸಾಹೇಬರ ಕಿವಿಗೆ ಬಿದ್ದರೆಷ್ಟು ಲೇವಡಿ ಮಾಡುವರೋ !

ಇಂದಿರೆ—ಇಸ್ಕೋಲು ಫಿಸ್ಸೈಲೋ ಮನೆಯ ಫಿಸ್ಸೈಲೋ ನಮಗೆ ತಿಳಿಯದಪ್ಪ

ಅನ್ನಪೂರ್ಣೆ—ಅಮ್ಮಯ್ಯ, ದಾರಿಕೆಟ್ಟುಹೋಯ್ತು. ಮೊಟ್ಟಮೊದಲು ಮಗುವಿಗೊಂದು ಎಳೇಹಾಕಿಬಿಡಿ. ಇಲ್ಲದಿದ್ದರೆ ಹುಡುಗ ಕೈಗೆ ಸಿಕ್ಕುವುದಿಲ್ಲ.

ಮೊಮ್ಮಗನು ಮುದುಕಿಯನ್ನು ಕುಚೇಷ್ಟೆಮಾಡಲೆಳಸಿದನು. ಆದರೆ ಇಂದಿರೆಯು ಅವಕಾಶಕೊಡದೆ ಸ್ವೈಜಭಾವದಿಂದ—"ಅಪ್ಪ, ನೀನು ಹರವಾಡಿ ಹಿರಿಯರ ಮನಸ್ಸು ನೋಯಿಸಬೇಡ. ನಿನಗೇನಪ್ಪ ಇದರಿಂದ ತೊಂದರೆ?"

ರಾಮು—ಅಮ್ಮ, ನಿನಗೆ ಲೆಕ್ಕಾಚಾರ ಗೊತ್ತಿಲ್ಲ. ನನಗೆ ತೊಂದರೆಯೇ— ಮುಂಜಿಗೆಂದು ನೀವು ಬೇಕಾದಷ್ಟು ವೆಚ್ಚವನ್ನು ಮಾಡಿಬಿಡುವುದು. ಆಮೇಲೆ ಸಾಲಸೋಲ ಹೆಚ್ಚಾಯ್ತೆಂದೂ ಮುಂದಕ್ಕೆ ಓದಿಸಲಾಗುವುದಿಲ್ಲವೆಂದೂ ನನ್ನ ವಿದ್ಯಾಭ್ಯಾಸಕ್ಕೆ ಕಲ್ಲುಹಾಕುವುದು. ಇಷ್ಟೇ.

ಇಂದಿರೆ—ಅಪ್ಪಯ್ಯ, ನೀನು ಸ್ವಲ್ಪವೂ ಯೋಚಿಸಬೇಡಪ್ಪ. ನಿನಗೆ ಅನಾನುಕೂಲವಾಗದಂತೆ ಮಾಡುವರು. ಒಳ್ಳೇ ಅಂಗಿಪಾಜಾಮೆಗಳನ್ನು ತಂದುಕೊಡುವರು.

ರಾಮು—ಕಡಲೇಪುರಿಯನ್ನು ತಂದುಕೊಡುವರೆಂದು ಏಕೆಹೇಳಲಿಲ್ಲ? ನಾನೇನು ಎಳೆಯ ಮಗುವೇನಮ್ಮ ?

ವಾಚಕರೆ, ಶ್ರೋತ್ರಿಯ ಬ್ರಾಹ್ಮಣವಂಶದಲ್ಲಿ ಹುಟ್ಟಿ, ಸತ್ಸಂಪ್ರದಾಯದಲ್ಲಿಯೇ ಬಳೆದಿದ್ದವರಿಗೂ ಸಹ ಕಾಲದೋಷದಿಂದ ಬುದ್ಧಿಯು ಹೇಗೆ ಬದಲಾಯಿಸುವುದೋ ನೋಡಿದಿರಾ !

ಇಷ್ಟರಲ್ಲೇ ನೆರೆಮನೆಯ ಸುಬ್ರಹ್ಮಣ್ಯನು ಬಂದನು ರಾಮಚಂದ್ರನನ್ನು ತನ್ನ ತೋಟಕ್ಕೆ ಕರದುಕೊಂಡು ಹೋಗಿ ಎಳನೀರಿನ ಔತಣಮಾಡಿಸಬೇಕೆಂದು ಅವನಿಗಾಸೆ. ಈಗ ಎಲ್ಲರೂ ಧಟ್ಟನೆ ಮೌನಾವಲಂಬಿಗಳಾದರು

ತಾಯ್ಮಕ್ಕಳ ಸಲ್ಲಾಪದ ಸಂಗತಿಯು ಸೀತಾಕಾಂತನವರಗೂ ಮುಟ್ಟಿತು. ಮಗನಿಗೀಗಲೆ ಮತಾಭಿಮಾನವೆಲ್ಲಿ ತಪ್ಪುವುದೋ ಎಂಬುದೊಂದುಕಡೆ, ಉಪನಯನಕ್ಕೆ ಹಣವನ್ನೊದಗಿಸಬೇಕಾದ ಯೋಚನೆಯೊಂದುಕಡೆ, ಮುಂಜಿಗವನನ್ನೊಪ್ಪಿಸಲು ಮತ್ತೇನು ಪಂಚಾಯಿತಿಯಾಗಬೇಕೋ ಎಂಬುದು ಮತ್ತೊಂದು ಕಡೆ, ಹೀಗೆ ಅವನಿಗೆ ಸರ್ವತೋಮುಖವಾದ ಚಿಂತೆಗವಕಾಶವಾಯ್ತು.

ಹೇಳಿದ ಗಡುವಿಗೆ ಸರಿಯಾಗಿ ಗಂಗಾರಾಮನೂ ಬಂದನು. ಆದರವನಿಗೆ ಸುಗ್ಗಿಯ ಕಂಗಾಣದ ಹೆಚ್ಚುಕೆಲಸ. ಇದುವರೆಗೂ ಕೇವಲ ದೂರ ಪ್ರಾಂತದ ತಾಲ್ಲೂಕ್‌ಗಳಲ್ಲೇ ಸರ್ಕಾರದ ಕೆಲಸದಲ್ಲಿದ್ದನು ಆದರಿಂದ ಪ್ರತಿವರ್ಷವೂ ತನ್ನೂರಿಗೆ ಬರಲಿಕ್ಕಾಗುತ್ತಿರಲಿಲ್ಲ ಆಕೆಲಸಗಳಿಲ್ಲ. ಈಗ ರಾಶಿ ಬಿದ್ದಿವೆ. ನಿಂತಕಡೆ ನಿಲ್ಲಲಿಕ್ಕೂ ಅವಕಾಶವಿಲ್ಲ. ಹಾಗೂ ಎರಡುಮೂರು ವೇಳೆ ಬಂದು ಸೀತಾಕಾಂತನನ್ನು ವಿಚಾರಿಸಿದನು. ಆತನು ಸಿಕ್ಕಲಿಲ್ಲ. ಹೀಗೆ ಪರಸ್ಪರ ದರ್ಶನಕ್ಕೆಕೂಡ ಒಂದುಸಲವೂ ಸಂದರ್ಭವು ದೊರಯಲಿಲ್ಲ. ಕಡೆಗೆ ಐದುದಿನಗಳನಂತರ ಕಲೆತರು. ಉಪನಯನದ ವಿಷಯವಾಗಿ ಪ್ರಸ್ತಾಪವು ನಡೆಯಿತು. ಒಳಿಕ ರಾತ್ರಿ ಇಬ್ಬರಿಗೂ ಅವಕಾಶವಿರುವುದರಿಂದ ಆಗ ಎಲ್ಲವನ್ನೂ ಯೋಚಿಸಬೇಕೆಂದು ಸಿದ್ಧಾಂತವಾಯ್ತು. ಅದೇ ರಾತ್ರಿ ಪಟ್ಟಿಯ ವಿಷಯವಾಗಿ ಚರ್ಚೆ. ಗಂಗಾರಾಮನು ಪರಿಶೀಲಿಸಿ ಕನ್ನಡಕವನ್ನು ಮೂಗಿನಿಂದ ಕೆಳಕ್ಕಿಳಿಸಿ—ಅಯ್ಯ, ಒಂದುಮಾತನ್ನುಸಿರುವೆನು. ಅದು ನಿನಗೆಷ್ಟುಮಟ್ಟಿಗೆ ಸಮ್ಮತವಾಗುವುದೋ ನಾನರಿಯೆನು. ನೀನು ಸಮ್ಮತಿಸಿದರೆ ನೆಮ್ಮದಿಯಾಗುವೆ. ಇಲ್ಲದಿದ್ದರೆ ಬಹಳ ಕಷ್ಟಕ್ಕೆ ಗುರಿಯಾಗುವೆ.

ಸೀತಾಕಾಂತ—ಅಣ್ಣಯ್ಯ, ನಾನು ನಿನ್ನ ಸಹಾಯವನ್ನು ಮರೆತಿಲ್ಲ ಹಿಂದೆ ನಿನ್ನ ಮಾತನ್ನು ಕೇಳದೇ ಇದ್ದಿದ್ದರೆ ನನಗೆ ಮೂರುದಾರಿಯಮಣ್ಣೇ ಗತಿಯಾಗುತ್ತಿದ್ದಿತು. ಆಪ್ತವಾಕ್ಯವು ಅಮೃತಪ್ರಾಯವು. ನೀನು ಹೇಳಿ ದಂತೆ ನಡೆಯುವೆನು.

ಗಂಗಾ—ಅಯ್ಯ, ಈಗೇನೋ ಹೀಗೆನ್ನುವೆ. ಮುಂದೆ ನಡೆಯುವುದು ಕಷ್ಟ. ಅಲ್ಲದೆ ಇಂತಹ ಸಂದರ್ಭಗಳಲ್ಲಿ ಸ್ತ್ರೀಯರ ಮುಷ್ಕರಗಳು ಬೇರೆ.

ಸೀತಾ—ಏನೇಆಗಲಿ, ನಿನ್ನ ಮಾತಿನಂತೆಯೇ ನಡೆಯುವೆನು. ಸಾವಿರ ವಿಘ್ನಗಳು ಒಂದರೂ ಪರಿಗಣಿಸೆನು.

ಗಂಗಾ--ಹಾಗಾದರೆ ಕೇಳು. ಯಾವಪಟ್ಟಿಯೂ ಬೇಕಿಲ್ಲ ಉಪ ನಯನವು ಬಾಲಕನಿಗೆ ಬ್ರಾಹ್ಮಣ್ಯವನ್ನುಂಟುಮಾಡುವ ವೇದೋಕ್ತಕರ್ಮವು. ಅಟ್ಟಹಾಸಸಂಭ್ರಮಗಳಿಂದ ಜನರನ್ನು ಮೆಚ್ಚಿಸಿ ಜಂಭಪಡೆಯಬೇಕಾದಂ ತಹ ಸಾಮಾಜಿಕಕಾರ್ಯವಲ್ಲ. ಬ್ರಹ್ಮಧರ್ಮನಿರತರೂ ನಮ್ಮ ಪೂರ್ವಿಕರೂ ಆದ ಆರ್ಯಮಹರ್ಷಿಗಳು ಅರಣ್ಯಗಳಲ್ಲಿ ನದೀತೀರದ ಪರ್ಣಶಾಲೆಗಳಲ್ಲಿ ವಾಸಿ ಸುತ್ತಿದ್ದರಷ್ಟೆ. ಆಗಿನದಕ್ಕಿಂತಲೂ ಶ್ರೇಷ್ಠವಾದ ಉಪನಯನವನ್ನು ನಡೆ ಯಿಸಲು ಯಾವ ಇತರರಿಗೂ ಸಾಧ್ಯವಿಲ್ಲ. ಅವರಕಾಲದಲ್ಲಿ ಸ್ವರ್ಣಯಜ್ಞೋ ಪವೀತ, ಕಂಬಾವತಿಯ ಮುಗುಟ, ಕಲಾಪತ್ತಿನ ಪಂಚೆ. ಕಾಶ್ಮೀರದ ಶಾಲು, ಬೇಕಾಗಿದ್ದುವೆ ? ಹುಡುಗನ ಕೊರಳಿಗೆ ಚಿನ್ನದಜೋಮಾಲೆಯೆಲ್ಲಿ ಯದು ? ಚಕ್ಕುಲಿ, ಚಿರೋಟಿ, ಬಾಗಿನಗಳೆಲ್ಲಿದ್ದುವು? ಯಾವ ಓಲಗದವರು ಕಳಾರಟ್ ಬ್ಯಾಂಡಿನವರುತಾನೆ ಬಾಜಿಸುತ್ತಿದ್ದರು ? ಯಾವಯಾವ ಬೀದಿ ಗಳಲ್ಲಿ ಅವರು ಮೆರೆವಣಿಗೆ ಹೊರಡುತ್ತಿದ್ದರು ? ಆಶ್ರಮಗಳಲ್ಲಿ ಅಗಸರು ಮೊದಲಾದವರೆಲ್ಲಿದ್ದರು ? ಉಡುಗೊರೆ, ಬಂಡಿಬಾಡಿಗೆ ರೈಲ್‌ಛಾರ್ಜು ಏನು ಬೇಕಾಗಿದ್ದುವು ? ಇಷ್ಟೆಲ್ಲಾ, ಇದಕ್ಕೆ ವಿಚಾರಿದಷ್ಟೆಲ್ಲಾ ಈಕಾಲದಲ್ಲಿ ನಡೆದರೂ 'ಮಂತ್ರಥೋಡೆ ಉಗುಳುಬಹಳ' ಎಂಬಂತೆಯೂ ಮಂತ್ರವಿ ಲ್ಲದ ಸಂಧ್ಯಾವಂದನೆ ಮನೆಯೆಲ್ಲಾ ಹಳ್ಳವೆಂಬಂತೆಯೂ ಉಪನಯನದ ಫಲವೇನೋ ಶೂನ್ಯವೇ. ಆಡಂಬರ, ಅಟ್ಟಹಾಸ, ದ್ರವ್ಯವ್ಯಯಗಳಲ್ಲಿ ಮಾತ್ರ ಪರ್ಯವಸಾನ. ಮತ್ತು ಇದು ಈಗ ಸಾಮಾಜಿಕ ಸಮ್ಮೇಳನದಂತೆ ನಡೆಯುತ್ತಿರುವುದು. ಈ ಪಟ್ಟಿಯನ್ನು ಆಚೆಗೆಸೆ. ಧೈರ್ಯಮಾಡು.

ಶಾಸ್ತ್ರೋಕ್ತರೀತಿಗೆ ಸ್ವಲ್ಪವೂ ತಪ್ಪದೆಯೂ ಏನೂ ಹೆಚ್ಚುಪೆಚ್ಚವಿಲ್ಲದೆಯೂ ಉಪನಯನವನ್ನು ನಡೆಯಿಸೋಣ.

ಸೀತಾಕಾಂತ—(ಮೂಗಿನಮೇಲೆ ಬೆರಳಿಟ್ಟುಕೊಂಡು) ಇದೇನು! ನೀನೂ ಹೀಗೆನ್ನುವೆಯಾ? ನಿನ್ನ ನನ್ನ ಉಪನಯನಗಳು ಎಷ್ಟೋ ವೈಭವ ದಿಂದ ನಡೆದದ್ದು ನೆನೆಪಿಲ್ಲವೆ? ನಮ್ಮ ಹಿರಿಯರು ಎಷ್ಟೆಷ್ಟುಸಾವಿರ ರೂಪಾ ಯಿಮುಟ್ಟಿಸಿ ಬ್ರಹ್ಮೋಪದೇಶವನ್ನು ಮಾಡಿದರು! ಅಯ್ಯೋ! ನನ್ನ ಕಾಲಕ್ಕೆ ಏಕಪುತ್ರನ ಉಪನಯನಕ್ಕೆ ಈ ದುರ್ಗತಿಯೇ!

ಗಂಗಾ—ಅಪ್ಪಾ, ವಿದ್ಯಾವಿಹೀನೆಯರಾದ ಸ್ತ್ರೀಯರಂತೆ ಮೂಢ ಪದ್ಧತಿಗಳಬೇಡ. ನಮ್ಮ ಹಿರಿಯರು ದುಂದುಮಾಡಿದುದು ದಿಟ. ಅವ ರಿಗೆ ಹೆಚ್ಚು ಅನುಕೂಲವಿದ್ದಿತು. ಆದರೆ ಆ ದುಂದಿನಿಂದ ಉಪನಯನದ ಶ್ರೇಷ್ಠತೆಯೇನೂ ಹೆಚ್ಚಲಿಲ್ಲ. ಆಡಂಬರಮಾತ್ರ ಅತಿ. ಈಗ ನಾನು ಹೇಳು ವುದರಲ್ಲಿ ಸಾರಹೆಚ್ಚು. ಪೂರ್ವದಲ್ಲಿ ಮಹರ್ಷಿಗಳು ದಿವ್ಯವಾಗಿ ಆಶೀರ್ವಾದ ಮಾಡುತ್ತಲೂ ಋಷಿಪತ್ನಿಯರು ಭಿಕ್ಷವನ್ನು ನೀಡುತ್ತಲೂ ಹವನಹೋಮ ಗಳು ನಡೆಯುತ್ತಲೂ ಕರ್ಮವು ಸಾಂಗವಾಗಿ ಸಾಗುತ್ತಿದ್ದಿತು.

ಸೀತಾಕಾಂತ— ಇದೆಲ್ಲಾ ಸರಿ. ಮುಖ್ಯವಾಗಿ ಬ್ರಾಹ್ಮಣಸಂತರ್ಪ ಣೆಯೇ ಬೇಡವೆ? ಇಲ್ಲಿಯ ೨೦ ಮನೆಗಳವರನ್ನೂ ಐದಾರುದಿನ ಎರಡು ವೇಳೆಯೂ ಭೋಜನಕ್ಕೆ ಕರಯಬೇಕಾದರೆ ಕಡೆಯಪಕ್ಷ, ಉಳಿದವೆಚ್ಚ ವೆಲ್ಲಾ ಸಾಮಾನ್ಯವಾಗಿ ನಡೆದರೂ ೫೦೦ ರೂಪಾಯಾದರೂ ಬೇಡವೆ?

ಗಂಗಾ—ಬ್ರಾಹ್ಮಣ ಭೋಜನವೇನೋ ಆಗತಕ್ಕದ್ದೇ. ಆದರೆ ಯಥಾ ಶಕ್ತಿ. ಊರಿನವರನ್ನೆಲ್ಲಾ ಏತಕ್ಕೆ ಕರೆಯಬೇಕು? ಏನಯ್ಯಾ ದವಲತ್ತು! ಈ ಕಾಲದಲ್ಲಿ ಅರಮನೆಯಲ್ಲೂ ಹೀಗೆ ನಡೆಯದು? ಉಪನಯನವನ್ನು ಈ ಕೊಳಕುಗ್ರಾಮಗಳಲ್ಲಿ ನಡೆಸುವುದೇ ಅನುಚಿತ. ಶೀತಲಾನದಿಯ ತೀರದಲ್ಲಿ ಮನೋಹರವಾದ ಇದೇ ಸುಂದರಗಿರಿಯಮೇಲೆ ಸುಂದರೇಶ್ವರನ ಸನ್ನಿಧಿ ಯಲ್ಲಿ ನಡೆಸಬಹುದಲ್ಲಾ! ಆಗ್ಗೆ ಈ ಈತಿ ಬಾಧೆಗಳೂ ತಪ್ಪುವುವು. ಕೇವಲ ಯೋಗ್ಯರಾದ ಕೆಲವು ಬ್ರಾಹ್ಮಣರನ್ನೂ ಕೆಲವರು ಸುಮಂಗಲಿಯರನ್ನೂ ಮಾತ್ರ ಆಮಂತ್ರಿಸಿ ಆದರಿಸಬಹುದು.

ಸೀತಾ—ನಮ್ಮ ಪೂರ್ವಿಕರು ಅಷ್ಟು ಚೆನ್ನಾಗಿ ಒಮಂಕಿದವರು. ಈ

ನನ್ನ ಕಾಲಕ್ಕೆ ಒಬ್ಬ ಮಗನಿಗೆ ಮುಂಜಿಮಾಡುವುದಕ್ಕೂ ಗತಿಯಿಲ್ಲದೆ ಬೆಟ್ಟಕ್ಕೋ ಗುಡ್ಡಕ್ಕೋ ಓಡಿಹೋದನೆಂದು ಮಂದಿಯಾಡಿಕೊಳ್ಳರೆ ?

ಗಂಗಾ—ನಾನಾಗಲೇ ಹೇಳಲಿಲ್ಲವೆ ? ಇದು ಜನರಿಗಾಗಿ ನಡೆಸತಕ್ಕ ಕರ್ಮವಲ್ಲ. ಬಾಲಕನಿಗೆ ಬ್ರಾಹ್ಮಣ್ಯವನ್ನು ಕೊಡತಕ್ಕದ್ದು. ಯಾರೇನಾದರೂ ಅಂದುಕೊಳ್ಳಲಿ ಕರ್ಮಕ್ಕೇನೋ ಲೋಪವಿಲ್ಲ. ಮತ್ತು ಶ್ವಪಚರು, ಪತಿತರು, ಅಸೂಯಾಪರರು. ಇಂತಹವರ ಅಯೋಗ್ಯಸಂಸರ್ಗವೇ ಇಲ್ಲ. ಉಪನಯನಕ್ಕೆ ಮಹತ್ತ್ವ ಹೆಚ್ಚುವುದು. ಅಲ್ಲದೆ ಇದು ವಟುವಿಗೆ ತುಂಬ ಶ್ರೇಯಸ್ಸಾಧಕ.

ಸೀತಾ—ಓಹೊ ಮರೆತಿದ್ದೆ. ಹುಡುಗನನ್ನುಪನಯನಕ್ಕೊಪ್ಪಿಸುವುದೇ ಕಷ್ಟವಾಗಿದೆಯಲ್ಲಾ ! ಅವನೇನೇನೋ ಪ್ರಶ್ನೆಹಾಕುತಾನಂತೆ. ಆದರೆ ಇನ್ನೂ ನನ್ನವರೆಗೂ ಬಂದಿಲ್ಲ. ಹೇಗೂ ಅದೂ ಒಂದು ದೊಡ್ಡ ಗಂಡವಾಗಿದೆ ಯಾವಕಾಲು ಮುರಿದರೂ ಸೊಂಟಕ್ಕೂನ. ಅಂತು ಇಂತು ನನಗೆ ಉಳಿವುಬಾಳಿಲ್ಲ. ಸಾಕಪ್ಪಾ ಸಂಸಾರದಸುಖ ಸಾಕು !

ಗಂಗಾ—ಅಷ್ಟೇಕೆಬೇಸರ? ಸಂಸಾರದಿಂದಾಗಿರುವ ಕೇಡೇನು? ಯಾವ ತೊಂದರೆಯನ್ನಾದರೂ ವಿವೇಕವೊಂದಿದ್ದರೆ ನಿವಾರಿಸಿಕೊಳ್ಳಬಹುದು. ತುಸ ತಾಳ್ಮೆಯಿಂದ ಯೋಚಿಸಿದರೆ ಎಲ್ಲವೂ ನೇರ್ಪಡುವುದು. ಒಳ್ಳೆಯದು. ಚಿಂತೆಯೇಕೆ. ನಿನ್ನ ಸುತನನ್ನುಪನಯನಕ್ಕೊಪ್ಪಿಸುವ ಭಾರವು ನನಗಿರಲಿ.

ಸೀತಾ—ನೀನೇ ನನ್ನ ಆಪದ್ಬಂಧು. ದಿಟ. ಮತ್ತೇನುಹೇಳಲಿಕ್ಕೂ ತೋರದು? ಬಳಿಕ ಇಬ್ಬರೂ ಸಮಾಹಿತರಾದರು. ವೈಶಾಖ ಶುದ್ಧ ಬಿದಿಗೆ ಬುಧವಾರ ರಾಮಚಂದ್ರನ ಉಪನಯನಲಗ್ನಕ್ಕೆ ಪ್ರಶಸ್ತವೆಂದಾಯಿತು.



## ಆರನೆಯ ಪ್ರಕರಣ.

ಮರುದಿನ ಗುರುವಾರ. ಸುಂದರಗಿರಿಯ ಸಂತೆ. ರಾಮಚಂದ್ರನು ಇದನ್ನು ನೋಡಿ ಬಹುಕಾಲವಾಗಿದ್ದಿತು. ಊರಲ್ಲಿದ್ದಾಗಲೂ ಅಲ್ಲಿಗೆಹೋಗಲು ಉದಾಸೀನತೆ. ಈಸಲಮಾತ್ರ ಗೆಳೆಯರ ಒತ್ತಾಯದಿಂದ ಅಲ್ಲಿಗೆ ಹೋಗಿದ್ದನು. ಚೆಲುವಾದ ಮತ್ತು ಬೆಲೆಯಾದ ಕೆಲವು ಒಳ್ಳೆಯ ಹೋರಿಗಳು,

ಶ್ರೇಷ್ಠವಾದ ತರಕಾರಿ, ಕೈಯಿಂದ ನೆಯ್ದ ಪಂಜೆ ದುಪ್ಪಟಿಗಳು, ರಾಶಿರಾಶಿಯಾಗಿ ಸುರಿದಿದ್ದ ದಿನಸುಗಳು, ಇವೆಲ್ಲಾ ಇವನಿಗೀಗ ಪ್ರೀತಿಜನಕವಾದವು ಒಂದೊಂದನ್ನಾಗಿ ಎಲ್ಲವನ್ನೂ ನಿಧಾನವಾಗಿ ನೋಡುತ್ತಾ ಬಂದನು. ನಮ್ಮ ರಾಜ್ಯವು ಕೇವಲ ತುಚ್ಛವಾದುದು, ಒಳ್ಳೆಯ ಯಂತ್ರಗಳು, ಕಾಗದ, ಸಾಬೂನು, ಪೆಪ್ಪರ್‌ಮೆಂಟ್, ಕ್ಷೌರದಕತ್ತಿ, ಫ್ಲಾನಲ್‌ಒಟ್ಟೆ ಇಂತಹವನ್ನು ನಮ್ಮ ದೇಶಕ್ಕೆ ಕಳುಹಿಸುವ ಪರಂಗಿಯುವರ ಸೀಮೆಯೇ ಮೇಲಾದುದು ಎಂದು ಹೊಟ್ಟೆಮೊದಲು ಏಕಪಕ್ಷವಾಗಿ ನಂಬಿದ್ದ ಇವನ ಮನಸ್ಸು ಈಚೆಗೆ ಸ್ವಲ್ಪಸ್ವಲ್ಪವಾಗಿ ಬದಲಾಯಿಸುತ ಬಂದಿತು. ಮೇಲ್ತರಗತಿಗಳಲ್ಲಿ ಸದುಪಾಧ್ಯಾಯರಿಂದ ನಡೆದ ಭೂವಿವರಣೆಯ ಬೋಧನೆಯಿಂದ ತಕ್ಕಮಟ್ಟಿಗೆ ಪರಾಮರ್ಶಕ್ಕೆ ಕಾರಣವಾಗಿದ್ದುದೇ ಇದಕ್ಕೆ ಮೂಲ. ಸಂತೆಯನ್ನೆಲ್ಲಾ ನೋಡಿದನು ಮನಸ್ಸಿನಲ್ಲಿ—ಆಹಾ! ಹಳ್ಳಿಗಾಡಿನ ಈ ಒರಟು ಸೀಮೆಯಲ್ಲೂ ಏನುಬೆಳೆ! ಎಂತಹ ಪಶುಗಳು! ಏನೇನು ಕೈಗಾರಿಕೆ! ಎಂದು ಚೆನ್ನಾಗಿ ಪರಿಭಾವಿಸುತ್ತ ಬಂದನು. ಶಾಸ್ತ್ರಜ್ಞಾನವು ಈಗ ಲೋಕವ್ಯವಹಾರಜ್ಞಾನಕ್ಕೆ ತಾಳೆ ಒರಲು ಸಂತೋಷಿಸಿದ್ದಲ್ಲದೆ ಈ ತತ್ತ್ವವನ್ನು ತನ್ನ ಗೆಳೆಯರಿಗೂ ತಿಳಿಸಿದನು. ಅವರು ತಮ್ಮ ಹಳ್ಳಿಗಾಡಿನ ಪ್ರಶಸ್ತ್ಯಕ್ಕೂ ಇವನ ಹೆಚ್ಚು ತಿಳಿವಳಿಕೆಗೂ ಹಿಗ್ಗಿಹಿಗ್ಗಿ ಕುಣಿದರು.

ರಾತ್ರಿ ಎಂಟು ಘಂಟೆ ರಾಮಚಂದ್ರನು ಸಂತೆಯಲ್ಲಿ ಕೊಂಡುತಂದಿದ್ದ ಹಲಸಿದಹಣ್ಣನ್ನು ಬಿಚ್ಚುತ್ತಿದ್ದನು. ಗಂಗಾರಾಮನು ಆರೋಗಣೆಯಾದನಂತರ ಎಂದಿನಂತೆ ಅಲ್ಲಿಗೆ ಮಲಗುವುದಕ್ಕೆ ಬಂದನು. ತಂದೆಯು ದೀಪಸ್ತಂಭದ ಬಳಿಯಲ್ಲಿ ಕುಳಿತು ದೀಪವನ್ನು ಮಾಟಿ ಹೆಚ್ಚಿಸುತ್ತಿದ್ದನು. ಈಗ ತಾನೇ ಮಾನೆಯನ್ನು ಮಲಗಿಸಿ ಮುದುಕಿಗೆ ಫಲಹಾರಕ್ಕೆ ಬಡಿಸಲೆಂದು ಇಂದಿರೆಯು ಅಡಿಗೆಯಮನೆಯನ್ನು ಹೊಕ್ಕಿದ್ದಳು. ಬಂದವನು ಬಾಗಿಲಲ್ಲೇ ನಿಂತು—ಓಹೋ! ಏನಯ್ಯ, ಕುಮಾರಕಂಠೀರವ, ಯುವರಾಜ ಕಡುಬಿನ ಹೊತ್ತಿಗೆ ಪಿಡಗಿನಹಾಗೆ ಬಂದೆನಯ್ಯ. ಘಮಘಮಾಯಿಸುತ್ತದೆಯಲ್ಲಾ! ಇದೇನು ಪಟ್ಟಣವಾಸದ ಹುಡುಗರು ಸೇಬು, ಅಂಜೂರ ಕಿತ್ತಳೆ, ಖರ್ಜೂರದ್ರಾಕ್ಷಿ ಇಂತಹ ಹಣ್ಣುಗಳನ್ನು ಬಿಟ್ಟು ಹಳ್ಳಿಯವರಂತೆ ಹಲಸಿನ ಹಣ್ಣು ತಿನ್ನುವುದುಂಟೆ ?

ರಾಮಚಂದ್ರ—ಮಾವಯ್ಯ, ಹಳ್ಳಿಗಳಿದ್ದರಲ್ಲವೆ ಪಟ್ಟಣ! ಇಲ್ಲದಿದ್ದರಲ್ಲೇನಿದೆ! ಎಷ್ಟು ಹೆಚ್ಚು ಬೆಲೆಕೊಟ್ಟರೆತಾನೆ ಇಂತಹ ಶ್ರೇಷ್ಠವಾದ ತನಿ ಹಣ್ಣು ಅಲ್ಲಿ ದೊರಕೀತೆ? ಯಾವುದೂ ದೂರದಿಂದಲೇ ಅಲ್ಲಿಗೆ ಬರಬೇಕು ಕಳಿತದ್ದು, ಕಸುಗಾಯಿ, ಇಲ್ಲವೆ ಹುಳಿತದ್ದು, ಒಣಗಿದ್ದು ಇಂತಹುದನ್ನೇ ಒಂದಕ್ಕಾರು ಬೆಲೆಯನ್ನು ಕೊಟ್ಟು ಕೊಂಡುಕೊಳ್ಳಬೇಕು. ಮತ್ತು ಈ ಋತುಕಾಲದಲ್ಲಿ ಈ ಹಣ್ಣು ಸಿಕ್ಕಿದುದು ಎಷ್ಟೋ ವಿಶೇಷವಲ್ಲವೆ, ನೋಡು ಮಾವ! ಹೀಗೆಂದು ಸಂತೆಯವಿಷಯದಲ್ಲಿ ತನಗೆ ತೋರಿದ ಸಂಗತಿಗಳನ್ನೆಲ್ಲಾ ವಿವರಿಸಿದನು.

ಹುಡುಗನ ಮೇಲಾದ ಮೇಧೆಯನ್ನೂ ಯೋಗ್ಯವಾದ ನಡತೆಯನ್ನೂ ಗಂಗಾರಾಮನು ಬಹುವಾಗಿ ಕೊಂಡಾಡಿದನು. ಬಳಿಕ ಹಲಸಿನಹಣ್ಣಿನ ಜತೆಗೆ ಮುದಕಿಯ ಮೊಸರವಲಕ್ಕಿಯ ಉಪಹಾರವೂ ಸೇರಲು ಎಲ್ಲರೂ ಮಲಗಿದ್ದರು.

ಗಂಗಾ—ಮಗು ಈ ತೊಟ್ಟಿಯಲ್ಲಿ ಬಹಳ ಚಳಿಯಪ್ಪ, ನಿನ್ನ ಕೊಠಡಿಯಲ್ಲೇ ಮಲಗುವುದಕ್ಕೆ ಸ್ವಲ್ಪ ಸ್ಥಳವನ್ನು ಕೊಡುತ್ತೀಯಾ?

ರಾಮ—ಓಹೊ! ಅಗತ್ಯವಾಗಿ. ಆದರೆ ಅಲ್ಲಿಯೂ ನಾನು ಕಿಟಕಿಗಳನ್ನು ತೆರೆದೇ ಮಲಗುವುದು. ನಿನಗೇನೂ ಅನಾನುಕೂಲವಿಲ್ಲದಿದ್ದರೆ ಆಗಬಹುದು. ನಾನೇನೂ ಗೊರಕೆಹೊಡೆಯುವುದೂ ಇಲ್ಲ.

ಗಂಗಾ—ಭಲೆಭಲೆಹುಡುಗ! ನೀನು, ಒಳ್ಳೆ ಮಾತಿನಲ್ಲೇ ಚುಚ್ಚಿಕೊಡುವೆಯಲ್ಲೊ! ಓಹೋ! ನೀನು ಆರೋಗ್ಯಶಾಸ್ತ್ರವನ್ನು ಬಲ್ಲವನು! ನಾನು ಗೊರಕೆಹೊಡೆಯುವೆನೆಂದು ಸೂಚಿಸಿದೆಯೊ? ನಾನೇನೂ ಗೊರಕೆಹೊಡೆಯುವುದಿಲ್ಲವಯ್ಯ

ರಾಮ—ಇರಬಹುದು ಮಾವಯ್ಯ, ತಮ್ಮತಮ್ಮ ಗೊರಕೆ ತಮತಮಗೆ ಕೇಳಿಸುವುದಿಲ್ಲ. ನನ್ನ ವಿಷಯ ಅಮ್ಮ ಹೇಳುವುದಪ್ಪ ಎಂದು ನಗುತ್ತ ಹೋಗಿ ತನ್ನ ಕೊಠಡಿಯಲ್ಲೇ ಗಂಗಾರಾಮನಿಗೂ ಹಾಸಿದನು. ತರುವಾಯ ಇಬ್ಬರೂ ಒಳಗೆ ಕುಳಿತರು.

ಗಂಗಾ—ನೀನು ಬ್ರಾಹ್ಮಣನಾಗುವುದು ಯಾವಾಗಯ್ಯ?

ರಾಮ—(ಬೆಚ್ಚಿ) ಇದೇನು ಮಾವ ಈಗ ಜಾತಿಕೆಟ್ಟಿರುವುದು?

ಗಂಗಾ—ನಿನಗಿದ್ದರಲ್ಲವೆ ಕೆಟ್ಟಿತು ?

ರಾಮು—ಅದೇನು ಹಾಗೆಂದರ ?

ಗಂಗಾ—ಅದು ಹಾಗಿರಲಿ (ಮೆಲ್ಲಗೆ) ನಿನಗೆ ಮುಂಜಿಯುಂತಲ್ಲೊ !

ರಾಮು—ಮುಂಜಿಯೂಬೇಡ ಏನೂಬೇಡ, ಸದ್ಯಕ್ಕೆ ಪರೀಕ್ಷೆಯಲ್ಲ ಪ್ಯಾಸಾಗಲಿ, ಸಾಕು.

ಗಂಗಾ—ಆಗಲಿಯಪ್ಪ. ಅದರಪಾಡಿಗದು ಇದರಪಾಡಿಗಿದು.

ರಾಮು—ಯಾಕೆಮಾವ, ಎಲ್ಲರೂ ಮುಂಜಿಮುಂಜಿಯೆಂದು ಪೀಡಿಸುತ್ತೀರಿ ? ಮೊನ್ನೆ ಅಮ್ಮನೂ ಕೇಳಿದಳು. ಅದರಿಂದೇನು ಪ್ರಯೋಜನ ? ಒರೀ ಖರ್ಚು ಮತ್ತು ದುಂದು.

ಗಂಗಾ—ಸರಿ, ಒಪ್ಪಿದೆ. ದುಂದಾಗಿ ಮಾಡುವುದು ಮುಂಜಿಯೇ ಅಲ್ಲ. ನಿಜವಾದ ಮುಂಜಿಯ ರೀತಿಯೇಬೇರೆ.

ರಾಮುಚಂದ್ರ—ಆಹಾ ! ಅಷ್ಟುಮಟ್ಟಿಗೆ ನಿಜವನ್ನು ತಿಳಿಸಿದರ ಸಾಕು. ಎಷ್ಟೋ ಉಪಕಾರ. ಹೇಳುಮಾವ.

ಗಂಗಾ—ಎಲ್ಲರಿಗಿಂತ ದೊಡ್ಡವನು ಯಾರು ? ಮಗು.

ರಾಮು—ದೇವರು.

ಗಂಗಾ—ನಾವು ದೇವರನ್ನು ಭಕ್ತಿಯಿಂದ ಆರಾಧಿಸಬೇಕು.

ರಾಮು—ಏಕೆ ?

ಗಂಗಾ—ನಮಗೆ ದಿವ್ಯವಾದ ಬುದ್ಧಿ, ಅದರಪ್ರಕಾರ ನಡೆಯಬಲ್ಲ ಸರ್ವಾತಿಶಯಕಾಯ, ಅಂಗಸೌಕರ್ಯ ಇವನ್ನೆಲ್ಲಾ ದೇವರು ನಮಗೆ ಅನುಗ್ರಹಿಸಿರುವನು. ಅಂತಹ ಜಗದೀಶ್ವರನಲ್ಲಿ ಭಕ್ತಿಯಿಡದಿದ್ದರ ನಾವು ದೋಷಿಗಳಾಗುವೆವ.

ರಾಮುಚಂದ್ರ—ದೇವರನ್ನು ಸೇವಿಸಲು ಮಾರ್ಗವಾವುದು ?

ಗಂಗಾ—ಮನದಲ್ಲೇ ಧ್ಯಾನಿಸುವುದು, ಬಾಯಿಂದ ಸ್ತೋತ್ರವನ್ನು ಪಠಿಸುವುದು, ವಿಗ್ರಹಾರಾಧನೆ, ಹವನಹೋಮಗಳು, ಹೀಗೆ ಹಲವು ವಿಧಗಳುಂಟು. ಒಂದೊಂದು ಪಂಗಡದವರೊಂದೊಂದು ಕ್ಲುಪ್ತಕ್ರಮದಲ್ಲಿ ದೇವರನ್ನಾರಾಧಿಸುವರು. ಅಂತಹ ಒಂದೊಂದು ಪಂಗಡದವರದೇ ಒಂದೊಂದು ಮತವೆನಿಸುವುದು. ಯಾವಯಾವ ಮತದವರು ಹೇಗೆಹೇಗೆ

ಸೇವಿಸಿದರೂ ಆಸೇವೆ ಸೇರುವುದೊಬ್ಬ ದೇವರಿಗೇನೆ. ಏಕೆಂದರೆ— ಎಲ್ಲರಿಗೂ ದೇವರೊಬ್ಬನೇ. ಆದರೂ ಅವನನ್ನು ಸೇವಿಸುವ ಮತಗಳು ಮಾತ್ರ ಹೀಗೆ ಬೇರೆಬೇರೆಯಾಗಿವೆ. ಈ ಮತಗಳವರನ್ನೇ ಹಿಂದುಗಳು, ಮಹಮ್ಮದೀಯರು, ಕ್ರೈಸ್ತರು, ಬೌದ್ಧರು, ಜೈನರು, ಪಾರ್ಶಿಯವರು ಹೀಗೆ ಬೇರೆಬೇರೆ ಹೆಸರುಗಳಿಂದ ಕರೆಯುತ್ತಾರೆ. ಪ್ರತಿಯೊಂದು ಮತದವರೂ ತಾವು ದೇವರ ಸ್ವರೂಪವನ್ನು ತಿಳಿದುಕೊಳ್ಳಲು ಶ್ರೇಷ್ಠವಾದ ಗ್ರಂಥಗಳನ್ನು ಪಡೆದಿರುತ್ತಾರೆ. ಈ ಭರತಖಂಡದಲ್ಲಿ ಹೆಚ್ಚು ಜನರಾದ ನಾವೆಲ್ಲಾ ಶ್ರೇಷ್ಠವಾದ ಹಿಂದೂಮತಕ್ಕೆ ಸೇರಿದವರು. ಅನಾದಿಯಾದ ನಮ್ಮ ಮತಗ್ರಂಥಗಳಿಗೆ ವೇದಗಳೆಂದು ಹೆಸರು.

ರಾಮು—ನಮ್ಮ ವೇದಗಳ ವಿಷಯವನ್ನು ನಾವು ತಿಳಿದುಕೊಳ್ಳುವ ಬಗೆ ಹೇಗೆ ?

ಗಂಗಾ—ಅದಕ್ಕೆ ತಕ್ಕ ಅಧಿಕಾರವನ್ನು ಸಂಪಾದಿಸಬೇಕು

ರಾಮು—ಯಾವ ಅಧಿಕಾರ ? ಏನು ಅಮಲ್ದಾರಿಯೆ ? ಬಡವರು ತಿಳಿಯಕೂಡದೋ ?

ಗಂಗಾ—ಮಗು, ಗೇಲಿಮಾಡಬೇಡ, ಅಧಿಕಾರವೆಂದರೆ ನೀನರಿತಿರುವಂತೆ ಸರ್ಕಾರದ ಹುದ್ದೆಯುಮಾತ್ರವಲ್ಲ. ಅದು ಮೇಲಿನವರನ್ನಾಶ್ರಯಿಸಿ ಹೊಟ್ಟೆಹೊರೆದುಕೊಳ್ಳುವ ಕೀಳ್ತರದುದ್ಯೋಗ. ನಾನು ಹೇಳುವುದಾದರೋ ಶ್ರೇಷ್ಠವಾದುದು. ಇಲ್ಲಿ ಅಧಿಕಾರವೆಂದರೆ ಯೋಗ್ಯತೆ. ಉಪನಯನದಲ್ಲಿ ಮೊದಲು ಗುರೂಪದೇಶವಾಗಿ ಬಳಿಕ ಉಪಾಕರ್ಮವಾದರೆ ಆಗ್ಗೆ ನಿನಗೆ ವೇದವನ್ನೋದುವ ಅಧಿಕಾರ ಅಂದರೆ ಅರ್ಹತೆಯುಂಟಾಗುವುದು.

ರಾಮಚಂದ್ರ—ವೇದವನ್ನೋದಿದರೆ ದೇವರ ಸ್ವರೂಪವು ಚೆನ್ನಾಗಿ ಗೊತ್ತಾಗುವುದೆ ?

ಗಂಗಾ—ಓಹೋ ! ತಿಳಿಯುವುದು. ಆದರೆ ನಾನು ಮೊದಲೇ ಹೇಳಿರುವಂತೆ ಉಪಾಕರ್ಮವಾಗುವವರೆಗೂ ವೇದವನ್ನು ಕಲಿಯಕೂಡದು. ಬಳಿಕ ಅದನ್ನು ಬಾಯಿಪಾಠಮಾಡಿ ಗುರುಮುಖತಃ ಅರ್ಥವನ್ನು ತಿಳಿದುಕೊಂಡರೆ ದೇವರ ಸ್ವರೂಪವು ಗೊತ್ತಾಗುವುದು.

ರಾಮು—ಮಾವಯ್ಯ, ಹಾಗಾದರೆ ನಾನೂ ನಮ್ಮ ವೇದವನ್ನು

ಕಲಿಯಬೇಕು. ಅದುಸರಿ, ಉಪನಯನದಲ್ಲಿ ಹುಡುಗನಿಗೆ ವೇಷಾಹಾಕುವರು, ಭಿಕ್ಷಾ ಎತ್ತಿಸುವರು, ಕುದುರೇಮೇಲೆ ಕುಳ್ಳಿರಿಸಿ ಮೆರೆವಣಿಗೆ ಮಾಡುವರು, ಏನೇನೋ ಗೊಂದಲಾಹತ್ತಿಸುವರು ಹೆಂಗಸರು ಒಂದು ಅಲಂಕಾರಮಾಡುವರು. ಓಲಗತಾಳಮೇಳಗಳ ಗದ್ದಲವು ಬೇರೆ. ಇದೆಲ್ಲಾ ಏಕೆ ?

ಗಂಗಾ—ಶಾಸ್ತ್ರದಲ್ಲಿ ಇದನ್ನೆಲ್ಲಾ ಹೇಳಿಲ್ಲ. ತಿಳಿಗೇಡಿಗಳು ಹೀಗೆ ಅನಾವಶ್ಯಕವಾಗಿ ಅತಿಮಾಡಿಕೊಂಡಿರುವರು. ನಿನ್ನುಪನಯನದಲ್ಲಿ ಇಂತಹುದಾವುದಕ್ಕೂ ಅವಕಾಶಕೊಡಬಾರದೆಂದಾಗಿದೆ.

ರಾಮು—ಮಾವಯ್ಯ, ಈ ಗದ್ದಲಕ್ಕಾಗಿಯೇ ನಾನು ಹೆದರುತ್ತಿದ್ದುದು ನನಗೂ ನಿಮ್ಮ ಮತದಲ್ಲಿ ಪೂರ್ಣಪ್ರೀತಿ. ಇದಕ್ಕಾಗಿ ಮಾತ್ರ ನಾನು ನಾಚುತ್ತಿದ್ದೆನು. ಪರೀಕ್ಷೆ ಕಳೆದನಂತರ ಬೇಸಗೆಯ ರಜಾದಲ್ಲಾವರನುಕೂಲ.

ಗಂಗಾ—ಆಗಲಿಯಪ್ಪ, ನೀನು ವಿಚಾರಶಾಲಿ ಒಳ್ಳೆಯ ಹುಡುಗ. ನೋಡೋಣ. ನನಗೆ ನಿದ್ದೆ ತೂಕಾಯಿಸುತ್ತಿದೆ



## ಏಳನೆಯ ಪ್ರಕರಣ.

ಉಪನಯನವು ಗೊತ್ತಾದುದು ಅನೇಕರಿಗೆ ತಿಳಿಯಿತು. ಸುಗ್ಗಿಯ ಕಾಲವೂ ಕಳೆಯುತ ಬಂದಿತು. ಬೇಕಾದ ಸಾಮಗ್ರಿಗಳನ್ನು ಶೇಖರಿಸಲು ಇಂದಿರೆಯು ಪತಿಯನ್ನು ಪ್ರಬಲವಾಗಿ ಪ್ರೇರಿಸುತಬಂದಳು. ಆದರೆ ಪ್ರತಿಯೊಂದುಪ್ರಶ್ನೆಗೂ ಮೌನವೇ, ಅಥವಾ 'ಆಗಲಿ ನೋಡೋಣ' ಎಂಬುದೇ ಉತ್ತರ. ಆಕೆಗೆ ಅವರ ತತ್ತ್ವವೇ ಗೊತ್ತಾಗದು. ಸುಮ್ಮನೆ ತಳಮಳಗೊಂಡಳು. ಹಂಬಲಿಸಿದಳು. ಏನುಮಾಡಿಯಾಳು! ಸ್ವಾತಂತ್ರ್ಯವಿಲ್ಲದ ಸ್ತ್ರೀ. ಈ ಮಧ್ಯೆ ಅನ್ನಪೂರ್ಣೆಯ ಮರ್ಮೋದ್ಘಾಟನೆಯ ಮಾತುಗಳು ಬೇರೆ ಅಂಕುಶಪ್ರಾಯವಾಗಿದ್ದವು. ಸಾಲಗಾರ ಬಿಟ್ಟರೂ ಸಾಕ್ಷಿಗಾರ ಬಿಡನೆಂಬ ಲೋಕೋಕ್ತಿಯು ಸುಳ್ಳೆ? ಸಾಲದ್ದಕ್ಕೆ ನೆರಹೊರೆಯವರು, ಗುರುತು ಕಂಡವರು, ಎಲ್ಲರೂ ಮುಂಜಿಯ ವಿಷಯವನ್ನು ಕೇಳುವರೇ. ಬಂದುದಿನ

ಇಂದಿರೆಯು ಮರುದಿನ ದೇವರ ಅಗ್ರೋದಕಕ್ಕೆಂದು ಹಸಿಪಮಡಿಯಲ್ಲಿ ಐದು ಪೂರ್ಣಕುಂಭಗಳನ್ನು ತರುತ್ತಿದ್ದಳು. ತಲೆಯಮೇಲೆರಡು ಸೊಂಟದ ಮೇಲೊಂದು ಬಿಂದಿಗೆಗಳು ಬಲಗೈಯಲ್ಲಿ ಪುಟ್ಟ ಬಿಂದಿಗೆಗಳಂತಹ ಎರಡು ತಂಬಿಗೆಗಳು. ಹೊಳೆಯಿಂದ ಮನೆಗರ್ಧಮೈಲಿ. ಆದರೂ ನಿರ್ಲಕ್ಷ್ಯ. ಪಟ್ಟಣವಾಸಿನಿಯರಂತೆ ಈಕೆಯು ಮನೆಯ ಕೋಣೆಕೋಣೆಯಲ್ಲಿಯೂ ನೀರಿಗೆ ಬೇರೆಬೇರೆ ನಲ್ಲಿಗಳನ್ನು ಪಡೆದು ಸುಖಪಟ್ಟವಳಲ್ಲ. ಆರೋಗ್ಯದೃಢಕಾಯೆ. ಈಕೆಗಿಂತ ಮೊದಲೇ ಹೊರಟು ಹಿಂದಿರುಗಿ ಬರುತ್ತಿದ್ದ ಕೆಲವರು ಸ್ತ್ರೀಯರು ದಾರಿಯಲ್ಲಿ ಆಡಿಕೊಳ್ಳುತಲಿದ್ದ ಹಲವು ನುಡಿಗಳು ಈಕೆಗೆ ಕರ್ಣಕಠೋರವಾದುವು. ಈ ಕೊರಗಿನಿಂದ ಆದಿನ ಊಟವೇ ಸೇರಲಿಲ್ಲ ಸೀತಾಕಾಂತನು ರಾತ್ರಿ ಭೋಜನೋತ್ತರ ಕಂಭಕ್ಕೆ ಒರಗಿಕೊಂಡು ಏನನ್ನೋ ಯೋಚಿಸುತ ಕುಳಿತಿದ್ದನು. ಕತ್ತೆತ್ತಿನೋಡಲು ಪ್ರಮಾದ! ಬಿಕ್ಕಳಿಕೆಯ ಅಳುವು, ಸುರ್ರುಬಸ್ಸು. ಅರೆನುಡಿ. ಕಂಬನಿಯ ತಟಕುಗಳು. ಕಂಡ ಕೂಡಲೆ ಖಿನ್ನನಾಗಿ—ಏಕೆ ಹೀಗಳುತ್ತೀಯೆ ? ಎಂದನು.-

ಇಂದಿರೆ—ಏನು ಹೇಳಲಿ ? ಇರುವನೊಬ್ಬ ಹುಡುಗ. ಒಳ್ಳೇದಾಯ್ತೇಳಿ. ನೀವು ಗಂಡಸರು. ಕಲ್ಲುಮನಸ್ಸಿನವರು. ಸೆರಗೊಡ್ಡಿಬೇಡಿಕೊಂಡರೂ ಕರುಣಬರಲಿಲ್ಲ. (ಅಳುವು ಅತಿಯಾಯ್ತು)

ಸೀತಾ—ಇದೇನು? ನನಗರ್ಥವಾಗದು.--ಸರಿಯಾಗಿ ಒದರು.

ಇಂದಿರೆ—ಅರ್ಥವೆಲ್ಲಿಯದು ? ಅನರ್ಥವೇ. ಕುಮಾರನ ಮುಂಜಿಯ ವಿಚಾರ. ಕಂಡಕಂಡವರೆಲ್ಲಾ ಒಂದೊಂದು ಮಾತಾಡುತ್ತಾರೆ. ಅವನನ್ನು ಇಂಗ್ಲೀಷಿಗೆ ಹಾಕಿ ಜಾತಿಕೆಡಿಸುತ್ತೇವೆಯಂತೆ. ದಾಂಡಿಗನಂತೆ. ಮುಂಜಿಯ ಎಳೆಯೇ ಇಲ್ಲವಂತೆ. ನಮಗೆ ಗತಿಯಿಲ್ಲವಂತೆ. ಹೆಣ್ಣಾಗಿದ್ದರೆ ಮಕ್ಕಳ ತಾಯಾಗಿರಬಹುದಾಗಿದ್ದಿತಂತೆ. ಅಯ್ಯೋ! ನಗೆಬಾಳು.

ಸೀತಾ—ಇದೇನು ಈ ವ್ಯಾಖ್ಯಾನ? ಸಾಕುಸಾಕು ನಿಲ್ಲಿಸು.

ಇಂದಿರೆ—ಇದು ನನ್ನ ವ್ಯಾಖ್ಯಾನವಲ್ಲ. ಹಾದಿಯಲ್ಲಿ ಬೀದಿಯಲ್ಲಿ ಹೋಗುವವರು. ನೀರಿಗೆ ಹೋಗಿಬರುವ ಹೆಂಗಸರು ಆಡಿಕೊಳ್ಳುತಿರುವ ಮಾತು.

ಸೀತಾ—'ಸರಿ, ಇಷ್ಟೇತಾನೆ? ಅವರೆಲ್ಲಾ ನಿನ್ನಂತಹ ಹೆಂಗಸರೇ. ಹೆಂಗಸರಿಗಿನ್ನೇನು ಕೆಲಸ?' ಎಂದು ಸುಮ್ಮನಾದನು. ಮುಂದಕ್ಕೆ ಮಾತೇ ಇಲ್ಲ.

ಇಂದಿರೆ—(ಬಹಳಹೊತ್ತು ನೋಡಿ ಕಡೆಗೆ) ಇದೇನು! ಯಾವಾಗ್ಲೂ ಒಂದೇ ಬಾಳಾಯ್ತಲ್ಲಾ! ಗಂಡಸರಿಗೆ ಹೀಗೆ ಮೌನಗೌರೀವ್ರತವೆ? 'ಗಂಡಸಿಗೇಕೆ ಗೌರೀದುಃಖ?' ಎನ್ನುವರಲ್ಲಾ! ಏನು! ಉಪನಯನವುಂಟೋ ಇಲ್ಲವೋ? ಇನ್ನು ೧೦–೨೦ ದಿನವುಳಿಯಿತಲ್ಲಾ! ಯಾವ ಏರ್ಪಾಡೂ ಇಲ್ಲ. ಚಕ್ಕುಲಿ, ಪುಳ್ಳಂಗಾಯಿಹಿಟ್ಟು, ಅರಿಸಿನದಪುಡಿ, ಮೆಣಸಿನಪುಡಿ, ಅವಲಕ್ಕಿ, ಹಪ್ಪಳ, ಸಂಡಿಗೆ ಇವೂ ಆಗಿಲ್ಲ ಯಾರವಮಾನಹೋಗಬೇಕು? ಮಗಳನ್ನು ಕರೆದುತರುವುದು ಯಾವಾಗ? ಕಡೆಗೆ ಸದ್ಯಕ್ಕೆ ಏಳೆಂಟುಪಲ್ಲ ಅಕ್ಕಿಯನ್ನಾದರೂ ತರಿಸಬಾರದೆ? ಲಗ್ನದ ಕಾಲ. ಜವಳಿ ತಗ್ಗಂತೆ. ಮೊದಲೇ ತಂದಿಟ್ಟುಕೊಳ್ಳಬೇಡವೆ! ಇದೇನಮ್ಮ! ಏನು ಗಂಡಸರು! ಯಾವಾಗ್ಲೂ ಹೀಗಿರಲಿಲ್ಲಮ್ಮ. ಹೆಣ್ಣು ಹೆಂಗಸು. ನಾನೇನು ಮಾಡೇನು? ಕುಟ್ಟೋ ಬೀಸೋ ಕೂಲೀಹೆಂಗಸರು ಬಂದು ಬಂದು ತಿರುಗಿ ಹೋಗುತ್ತಿದ್ದಾರ. ಹರದತ್ತಭಟ್ಟರ ಮನೆಯ ಮದುವೆಗೆ ಪಟ್ಟಣದಿಂದ ಬಂದಿರುವ ಬ್ಯಾಂಡಿನವರಿಗೇ ಹೇಳಿ ಹತ್ತೋ ಐದೋ ಮುಂಗಡಾ ಕೊಟ್ಟಿರಬಾರದೆ? ಅಡಿಗೆಯವರಿಗೂ ಪರಿಚಾರಕರಿಗೂ ಹೇಳುವುದು ಯಾವಾಗ? ಆ ಸಮಯಕ್ಕೆ ಯಾರು ಸಿಕ್ಕುವರು? ಬಾಳೆಲೆ ತರಕಾರಿಗಳಿಗಾದರೂ ಹೇಳಿದ್ದೀರಾ? ಅಕ್ಕೀಭಿಕ್ಷದ ಜೋಯಿಸರು ಮಾತ್ರ, ಪಾಪ, ನಿತ್ಯವೂ ಎರಡುಮೂರುಸೇಳೆ ಬಂದು, 'ಮುಂಜಿಗಿದುಬೇಕೆ? ಅದುಬೇಕೆ? ಒಟ್ಟಾಗಿ ತೆಗೆದುಕೊಂಡರ ಅಗ್ಗ' ಎಂದು ದರತಿರುಗಿ ಹೋಗುತ್ತಿದ್ದಾರೆ.

ಸೀತಾಕಾಂತನು ಎಲ್ಲವನ್ನೂ ಆಲಿಸಿದನು. ಆದರೂ ಮಿತ್ರನ ಹಿತೋಕ್ತಿಯಂತೆ ದೃಢಪ್ರತಿಜ್ಞೆ. ಇದಕ್ಕೆಲ್ಲಾ ಮನಗೊಡಲಿಲ್ಲ. ಕಡೆಗೇನಾದರೂ ಉತ್ತರವನ್ನು ಕೊಡಲೇಬೇಕಾಗಿ ಒರಲು—'ಏಕೆ ವೃಥಾ ವ್ಯಥೆಪಡುವೆ? ನಿನಗಿಂತ ನನಗೆ ಹೆಚ್ಚು ಯೋಚನೆ ಪೇಚಾಡಬೇಡ. ಎಲ್ಲಾ ಅನುಕೂಲಿಸುವುದು. ಊಟಮಾಡಿಬಾ, ಹೋಗು,' ಎಂದನು.

'ಎಲ್ಲಕ್ಕೂ ಏನೋ ಏರ್ಪಾಡು ಮಾಡಿದಾರ. ಹಾಗಿಲ್ಲದೆ ಸುಮ್ಮನೆ

ಕುಳಿತಿರತಕ್ಕವರ ನಮ್ಮಮನೆ ಗಂಡಸರು ? ಅಬ್ಬಬ್ಬ ! ಎಷ್ಟು ಮಾಡಿದ ಕೈಯೊ ? ಇರಲಿ, ಊಟಮಾಡಿಕೊಂಡುಹೋಗಿ ಎಲ್ಲವನ್ನೂ ತಿಳಿಯುವೆನು.' ಎಂದುಕೊಂಡು ಹಿಗ್ಗುತ್ತ ಸಮಾಧಾನದಿಂದ ಭೋಜನಮಾಡಿ ತೃಪ್ತಳಾದಳು. ಕೇವಲ ಸಡಗರದಿಂದ ಯಜಮಾನರನ್ನು ಕಾಣಲೆಂದು ಪುನಃ ಬರುವುದರಲ್ಲಿದ್ದಳು. ಆದರೆ ಆಗ್ಗೆ ಸರಿಯಾಗಿ ತೊಟ್ಟಿಲಲ್ಲಿ ಕಿರ್ರನೆ ಮಗುವು ಅರಚಿತು ಕ್ಷೀರಪಾನಮಾಡಿ ಸುಖವಾಗಿ ಮಲಗಿದ್ದ ಶಿಶುವಿನ ರಕ್ತಪಾನಮಾಡಲೆಳಸಿದ ಮತ್ಕುಣಗಳೇ ಇದಕ್ಕೆ ಕಾರಣ. ಹಾಗೂ ಮಗುವನ್ನೆತ್ತಿಕೊಂಡೇ ಪತಿಯನ್ನು ಸಮೀಪಿಸಿದಳು. ಆಗ್ಗಾಗಲೇ ಆತನು ನಿದ್ರಾಧೀನನಾದಂತೆ ತೋರಿತು. ಮಗುವಿನಬ್ಬರದಿಂದ ನಿದ್ರಾಭಂಗವಾಗಬಾರದೆಂದು ಹೊರಟುಹೋದಳು. ಆತನು ನಿದ್ರೆಯಲ್ಲಿದ್ದನೋ ಚಿಂತೆಯಲ್ಲಿದ್ದನೋ ನಮಗೇಗೊತ್ತು ಅಂತು ಈ ನಟನೆಯಿಂದ ಸದ್ಯಕ್ಕೆ ಹೆಂಡತಿಯ ಕಾಟವು ತಪ್ಪಿತು. ಬೀಸುವ ದೊಣ್ಣೆಗೆ ತಲೇತಪ್ಪಿದರೆ ಸಾವಿರ ವರ್ಷ ಆಯುಸ್ಸು.

ಭಾನುವಾರ. ಪರೀಕ್ಷೆಯು ಸಮೀಪಿಸಿದೆ ರಾಮಚಂದ್ರನಿಗೆ ಅನವರತ ವ್ಯಾಸಂಗಸಮಯ. ಆದರೆ ಇವನನ್ನು ತುಂಬ ಪ್ರೀತಿಸುತ್ತಿದ್ದ ಗಣಿತಬೋಧಕನಾದ ಭವಾನೀಶಂಕರನನ್ನು ಸನ್ಮಾನಿಸಲು ಆದಿನ ಒಂದು ಸಂತೋಷಕೂಟ. ಆತನಿಗೆ ಅಲ್ಲಿಂದ ವರ್ಗ. ಇನ್ನು ಪುನಃ ಇವನಿಗೆ ಆತನ ಬೋಧನೆಯು ದುರ್ಲಭ. ಆದುದರಿಂದ ಸಂಜೆನಾಲ್ಕು ತಾಸಿನವೇಳೆಗೆ ತಾನೂ ಶಾಲೆಗೆ ಹೋಗಿ ಸಹಪಾಠಿಗಳ ಸಂಗಡ ಕಲೆತನು. ಕೆಲವು ಉಪಹಾರಗಳು ಹಂಚಲ್ಪಟ್ಟವು. ದೊನ್ನೆಗಳು ಕೈಗೆ ಬಂದಕೂಡಲೆ ಗದ್ದಲವು ಸರ್ವತ್ರ ಕಡಮೆಯಾಯಿತು. ಆದರೆ ಆಪ್ತಮಿತ್ರರೈವರು ಸೇರಿದ ಒಂದು ಗುಂಪಿನಲ್ಲಿ ಮಾತ್ರ ಬಾಯಿಗೆರಡು ಕೆಲಸ. ಆ ಪ್ರಸ್ತಾಪಕ್ಕೆ ರಾಮಚಂದ್ರನ ಮುಂಜಿಯೇ ಸುದ್ದಿ.

೧ನೆಯವನು—ನಿನ್ನ ಥ್ರೆತ್ ಸರಿಮನಿ (Thread Ceremony) ಯಾವಾಗ ರಾಮಚಂದ್ರ ?

೨ನೆಯವನು—ಓ ಯಸ್ (Oh yes) ! ಮರೆತಿದ್ದೆ ವಾಟ್ (what) ರಾಮ್ ? ಮುಂಜಿ ಯಾವಾಗಯ್ಯ ?

೩ನೆಯವನು—ಈ ಸಮ್ಮರ್ ಹಾಲೀಡೇಸ್ (Summer Holi-days) ನಲ್ಲಾದೀತು. ವಾಟ್ (What)? ಕಮಾನ್ (come on). ಅಚ್ಛಾ! ಓಹೋ! ಏನಯ್ಯ, ನೀನು ಇನ್ನುಮೇಲೆ ಹೋಟಲಿಗೆ (Hotel) ಬರುವುದಿಲ್ಲ ಹಾಗಾದರೆ? ಅದೇಕೆ? ಮುಂಜಿಯಾದರೆ ಕಾಫಿ (Coffee) ಬೇಡವೊ? ನಾನ್‌ಸೆನ್ಸ್ (nonsense).

ಮತ್ತೊಬ್ಬ—ಹಾಗಲ್ಲಕಾಣೋ. ವಿಲೇಜ್‌ಪೀಪಲ್ ಬಹಳ ಆರ್ಥೋ ಡಾಕ್ಸ್ (Village people very orthodox) ಬಹಳ ಮಡಿ. ಏನು ರಾಮ್ ಅಲ್ಲವೆ?

ರಾಮಚಂದ್ರನು ಎಲ್ಲಕ್ಕೂ ಪ್ರಸನ್ನತೆಯನ್ನೇ ಉತ್ತರವನ್ನಾಗಿ ಕೊಟ್ಟನು.

ಇನ್ನೊಬ್ಬ—ಏನಯ್ಯ, ನಾವೂ ಬರೋಣವೊ?

ಬೇರೆಯವನು—ವಾಟ್ ಡೂ ಯೂ ಮೀನ್ (What do you mean)? ಅವನು ಆಗಲೇ ನಮ್ಮ ಫ್ರೆಂಡ್ಸಿಗೆಲ್ಲಾ ಜನರಲ್ ಇನ್ವಿಟೇಷನ್ (General Invitation) ಕೊಟ್ಟಿದ್ದಾನೆ.

೧ನೆಯವನು—ವೆರಿಗುಡ್ (Very good).

ಭವಾನೀಶಂಕರನಿಗೆ ಸತ್ಕಾರವನ್ನು ಸಲ್ಲಿಸಿ ಸಮಸ್ತ ವಿದ್ಯಾರ್ಥಿಗಳೂ ಆತನನ್ನು ಬಿಡಾರಕ್ಕೆ ಬಿಟ್ಟುಬಂದರು. ರಾಮಚಂದ್ರನು ಮಾತ್ರ ಆ ಗುರು ವಿನಪ್ಪಣೆಯಂತೆ ಅಲ್ಲಿಯೇ ಉಳಿದುಕೊಂಡನು. ಇವನಿಗೆ ಮೇಲಾದ ಬುದ್ಧಿ ವಾದಗಳೊಡನೆ ಹಲವು ಪುಸ್ತಕಗಳು ಆತನಿಂದ ದೊರೆತವು.

ಮರುದಿನ ಸಾಹೇಬನ ತರಗತಿಯಲ್ಲೂ ರಾಮಚಂದ್ರನ ಉಪನಯನದ ವಿಷಯವಾಗಿಯೇ ಹುಡುಗರ ಸಲ್ಲಾಪ.

ಸರ್ (Sir), ರಾಮಚಂದ್ರನಿಗೆ ಈ ರಜಾದಲ್ಲಿ ಮುಂಜಿಯಂತೆ.

ಸಾಹೇಬ—ಯೂ ಬಾಯ್ಸ್ ಡೋಂಟ್ ಸ್ಪೀಕ್ ಇಂಗ್ಲಿಷ್ (You boys don't speak English). ವಾಟ್ ಇಸ್ ಇಟ್ (What is it)?

ಹಾಗೆಂದರೇನು ಸರ್, ಕನ್ನಡದಲ್ಲಿ ಪ್ಲೀಸ್ (Please) ಹೇಳಿ.

ಹಾಲೆನ್ (Hollen) ಸಾಹೇಬನು ವೃದ್ಧನು. ವಿದ್ಯಾರ್ಥಿವತ್ಸಲನು.

ಈತನಿಗೆ ಕೋಪವೂ ಶಿಕ್ಷೆಯೂ ಸರಿಬೀಳವು. ಹೈಸ್ಕೂಲ್ ವಿದ್ಯಾರ್ಥಿಗಳ ಇಂಗ್ಲೀಷ್ ಭಾಷಾಜ್ಞಾನವು ಸಾಲದಿರುವುದನ್ನು ಈತನು ಸಹಿಸನು. ಇದಕ್ಕಾಗಿ ಮಿಡಲ್ ಸ್ಕೂಲುಗಳನ್ನು ಹಳಿಯುವನು. ಹೇಗಾದರೂ ಹೈಸ್ಕೂಲಿನ ಕೀಳ್ತರಗತಿಯಿಂದಲೂ ಬಾಲಕರನ್ನು ಇಂಗ್ಲೀಷಿನಲ್ಲೇ ಮಾತನಾಡುವಂತೆ ಮಾಡಬೇಕೆಂದು ಎಷ್ಟೋ ಯತ್ನಿಸುತ್ತಿದ್ದನು. ಗುರುವಿಗೆ ತಿರುಮಂತ್ರ ಹೇಳುವ ಹುಡುಗರು ಈತನಿಗೇ ಕನ್ನಡವನ್ನು ಕಲಿಸಿಕೊಡುತ ಬಂದರು. ಸ್ವಲ್ಪಹೊತ್ತು ನಿದಾನವಾಗಿ ಸಲ್ಲಾಪವು ನಡೆದನಂತರ ಸಾಹೇಬನಿಗೆ ಮುಂಜಿಯ ವಿಷಯವು ಅರ್ಥವಾಯಿತು.

ಆಗ ಈತನು--ಓ ನೌ ಐ ಅಂಡರ್‌ಸ್ಟ್ಯಾಂಡ್(Oh ! now I understand) ಎಂದನು.

ಹುಡುಗರು ಪುನಃ--ಕನ್ನಡದಲ್ಲಿ ಪ್ಲೀಸ್ ಸರ್ (Please sir). ಎಂದು ಗದ್ದಲಮಾಡತೊಡಗಿದರು. ಬಳಿಕ ಸಾಹೇಬನು ಹೇಳಿದುದನ್ನು ಒಬ್ಬ ಪ್ರೌಢವಿದ್ಯಾರ್ಥಿಯು ಈ ಮುಂದೆ ಹೇಳುವಂತೆ ಪರಿವರ್ತಿಸಿದನು--- ಓ, ನೀವು ಹಿಂದುಗಳು ಒಗೆಬಗೆ ತಿಂಡಿಗೆ ಒಗೆಬಗೆ ಹಬ್ಬ. ಒಬ್ಬಟ್, ಪೂರೀಸ್, ಚಿರೋಟಿ, ಫ್ರೈಡ್ ಸರಿಮುಸೀಗೆ ಎಲ್ಲಾ ಬೇಕೇನೋ !

ವಿದ್ಯಾರ್ಥಿಗಳು—ಸರ್, ರಿಲಿಜಿಯಸ್ ಕರ್ಮ, (Sir Religious Karma)

ಸಾಹೇಬ—ವೈ ಆಲ್ ದಿಸ್ ವೇಸ್ಟ್ (Why all this waste)?

ವಿದ್ಯಾರ್ಥಿಗಳು—ಹಾಗೆನ್ನಬೇಡಿ ಸರ್, ನಿಮಗೆ ಗೊತ್ತಿಲ್ಲ.

ಸಾಹೇಬ—ವಿ ಕ್ರಿಶ್ಚಿಯನ್ಸ್ ಡೋಂಟ್ ಅಗ್ರೀ ವಿತ್ ಯು (We Christians don't agree with you) ನಾವು ಕ್ರಿಶ್ಚಿಯನ್ನರು. ನಿಮ್ಮ ಮಾತು ಒಪ್ಪುವುದಿಲ್ಲ.

ಇನ್ನೊಬ್ಬ ವಿದ್ಯಾರ್ಥಿಯು ನಿಂತು ಸಪ್ರತಾಪನಾಗಿ —ಸರ್, ನಮ್ಮ ಮತದ ವಿಷಯವಾಗಿ ಏನೂ ತಿಳಿಯದೆ ಏಕೆ ದೂರುವಿರಿ ? ತಿಂದು ನೋಡಿ ಪರಲ್ಲವೆ ಸಕ್ಕರೆಯ ರುಚಿ ತಿಳಿದೀತು ? ನಾವು ನಿಮ್ಮಂತೆ ಪರಮತವನ್ನು ದೂಷಿಸತಕ್ಕವರಲ್ಲ.

ಸಾಹೇಬ—ಹೌ ಆರ್ ವಿ ಟು ನೊ ಯುವರ್ ರಿಲಿಜನ್ (How

are we to know your religion) ನಾವು ನಿಮ್ಮ ಮತವನ್ನು ತಿಳಿಯುವ ಬಗೆ ಹೇಗೆ ?

ವಿದ್ಯಾರ್ಥಿಗಳು—ನೀವು ನಮ್ಮ ಮತಕ್ಕೆ ಸೇರಿದರೆ ತಿಳಿದೀತು ಸರ್.

ಸಾಹೇಬ—ನಗುತ್ತ—ಓ ಯಸ್, ಆಲ್ ರೈಟ್, ರಾಮಚಂದ್ರ ಐ ಹೋಪ್ ಯೂ ವುಡ್ ಬಿಕಂ ಎ ಶಂಕರಾಚಾರ್‍ಯ (I hope you would become a Sankaracharya) ಒಳ್ಳೆಯದು, ಸರಿ. ರಾಮಚಂದ್ರ, ನೀನೊಬ್ಬ ಶಂಕರಾಚಾರ್ಯನಾಗುವೆಯೆಂದು ನಾನು ಹಾರೈಸುತ್ತೇನೆ.

ರಾಮಚಂದ್ರ—ಥ್ಯಾಂಕ್ ಯೂ ಸರ್ (Thank you sir).

ಇಷ್ಟರಲ್ಲೇ ಗಂಟೆಯಾಯ್ತು. ಶಾಲೆಯನ್ನು ಬಿಟ್ಟುಬಿಟ್ಟರು.



## ಎಂಟನೆಯ ಪ್ರಕರಣ.

ವಸಂತಕಾಲ. ಎಲ್ಲೆಲ್ಲೂ ಮಾವಿನಮರಗಳು ಚಿಗುರಿ ಮನೋಹರವಾಗಿರುವುವು. ಮಲ್ಲಿಗೆಸಂಪಿಗೆಹೂಗಳಸುಗ್ಗಿ. ರಾಮೋತ್ಸವ, ಹರಿಕಥ ಸಂಗೀತಸಮ್ಮೇಳನ ಇವುಗಳ ವಿಜೃಂಭಣೆ. ಪಾನಕಪೂಜೆಗಳ ಸರಬರಾಜು ಬೀಸಣಿಗೆಗಳಿಂದ ಬಿಡಿದು ಗಾಳಿಯನ್ನೇಳಿಸುವ ಕಾಲ. ಎಲ್ಲಿನೋಡಿದರೂ ದಿವಾಸ್ವಾಪ, ನಿಶಾಜಾಗರಣೆ. ಬೆಳುದಿಂಗಳ ಆಹ್ಲಾದ. ಶೀತಲವಸ್ತುಗಳ ಸೇವನೆ. ಏಪ್ರಿಲ್ ತಿಂಗಳಲ್ಲಿ ನಡೆಯುವ ಪರೀಕ್ಷೆಗಳೆಲ್ಲಾ ಮುಗಿದುವು. ವಿದ್ಯಾರ್ಥಿಗಳು ತಮ್ಮ ತಮ್ಮ ಸ್ಥಳಗಳಿಗೆ ಹೊರಡುವುದರಲ್ಲಿದ್ದಾರೆ. ಇವರಲ್ಲರಿಗೂ—ಮುಖ್ಯವಾಗಿ ರಾಮಚಂದ್ರನಿಗೆ, ಊರಿಗೆ ತೆರಳುವ ಉದ್ದೇಶವು ಇಮ್ಮಡಿ. ಉತ್ಸಾಹವಾದರೋ ನೂರ್ಮಡಿ. ಮಾತಾಪಿತೃಗಳ, ಅತ್ರ್ತಾಪಿ ಇಂದಿರೆಯ ಸಂಭ್ರಮಕ್ಕಂತೂ ಪಾರವೇ ಇಲ್ಲ. ದಿನಬೆಳಗಾದರೆ ಕರುವನ್ನಗಲಿದ ಹಸುವಿನಂತೆ ಹಂಬಲಿಸುತ್ತ ನಿರೀಕ್ಷಿಸುವಳು.

ಯುಗಾದಿಹಬ್ಬಕ್ಕೆ ಗಂಗಾರಾಮನೂ ಬಂದನು. ಪುನಃ ತನ್ನ ಸರ್ಕಾರದ ಕೆಲಸಕ್ಕೆ ಹೋಗಲಿಲ್ಲ. ಈತನು ಪೂರ್ಣಕಾಮನೆಂಬುದು ನಮಗೆ ಗೊತ್ತೇ. ಈಗ ತಾನಾಗಿಯೇ ಉದ್ಯೋಗದಿಂದ ನಿವೃತ್ತನಾಗಿರುವನು. ಪಿತ್ರಾರ್ಜಿತವಾದ

ಅಸ್ತಿಮುಜತಿಗೆ ಯಥೋಚಿತವಾಗಿ ದೊರೆಯುವ ವಿಶ್ರಾಂತಿವೇತನವು ಸಾಕೆಂದು ತೃಪ್ತನಾದನು. ಈ ಕಾಲದ ಕೆಲವುಜನ ಸರ್ಕಾರದ ದೊಡ್ಡ ಅಧಿಕಾರಿಗಳನ್ನು ನೋಡಿ. ಸ್ವಾಭಾವಿಕವಾಗಿ ವಯಃಕಾಯಗಳಲ್ಲಿ ವೃದ್ಧರಾದರೂ ಸರ್ಕಾರೀ ಜನ್ಮಪತ್ರಿಕೆಯಂತೆ ತಾವು ತರುಣರೆಂದೂ ಸರ್ವಶಕ್ತರೆಂದೂ ಇನ್ನೂ ಹಲವು ಕಾಲ ದುಡಿದು ರಾಜ್ಯವನ್ನುದ್ಧಾರಮಾಡಬಲ್ಲವರೆಂದೂ ತಮ್ಮ ಉದ್ಯೋಗದ ಅವಧಿಯನ್ನು ಹೆಚ್ಚಿಸಿಕೊಳ್ಳಲು ಪ್ರಾರ್ಥಿಸುವರಷ್ಟೆ. ಗಂಗಾರಾಮನಾದರೊ ಇದಕ್ಕೆ ಭಿನ್ನಸ್ವಭಾವದವನು. ಗ್ರಂಥವ್ಯಾಸಂಗದಿಂದ ಇಹಪರಗಳನ್ನು ಸಾಧಿಸಿಕೊಳ್ಳಬೇಕೆಂದು ಕುತೂಹಲಪಡುವನು.

ಗಂಗಾರಾಮನೂ ಸೀತಾಕಾಂತನೂ ರಾಮಚಂದ್ರನ ಉಪನಯನದ ವಿಚಾರವಾಗಿ ಯೋಚಿಸಿದ್ದರಷ್ಟೆ. ಈ ಏರ್ಪಾಡು ಸ್ವಲ್ಪಸ್ವಲ್ಪವಾಗಿ ತಿಳಿಯುತ ಬಂದಂತೆಲ್ಲಾ ಇಂದಿರೆಯ ವ್ಯಸನವೂ ಕೋಪವೂ ಕ್ರಮಕ್ರಮವಾಗಿ ಬೆಳೆಯತೊಡಗಿದವು. ಈಕೆ ಸಭ್ಯೆ. ಮಾನಿತೆ. ಪತಿಗೆದುರುಮಾತಾಡಿ ಪ್ರತಿಭಟಿಸುವುದನ್ನರಿಯಳು. ಈಗ ಹೇಗೂ ಮನಸ್ಸು ನಿಲ್ಲದೆ ಕಂಡಕಂಡವರ ಸಂಗಡಲೆಲ್ಲಾ ಇದನ್ನು ಹೇಳಿಕೊಂಡು ಗೋಳಾಡುವಳು. ಮಗನ ಮೂಲಕವಾದರೂ ಮುರಾಡಾ ಹಾಕಿಸುವುದೆಂದರೆ ಅವನಿನ್ನೂ ಅತಿ. ಸುಂಕದವರ ಸಂಗಡ ಸುಖದುಃಖ ಹೇಳಿಕೊಂಡಹಾಗೆಯೋ. ಅಥವಾ ಮಾನೆಯ ದೀಪವೆಂದು ಮುತ್ತುಕೊಟ್ಟಂತೆಯೋ. ಆದರೂ ಅವನೂ ಒರಲಿ, ನೋಡೋಣ, ಎಂದು ತವಕದಿಂದ ಎದುರುನೋಡುತ್ತಿದ್ದಳು.

ಒಂದುದಿನ ಬೆಳಗ್ಗೆ ಎಂಟುಘಂಟೆ. ರಾಮಚಂದ್ರನು ಬಂದೇಬಿಟ್ಟನು. ಕುಶಲಪ್ರಶ್ನೆಗಳಾದುವು. ಸಕಾಲದಲ್ಲಿ ಭೋಜನ. ಬಳಿಕ ಅವನು ತಲೆಯ ಕೆಳಕ್ಕೆ ತೋಳನ್ನಿಟ್ಟು ಮೈನೀಡಿದನು. ಹಿಂದಣರಾತ್ರಿ ಬಂಡಿಯಪಯಣದಲ್ಲಿ ನಿದ್ರೆಬಂದಿರಲಿಲ್ಲ. ಎದ್ದಬಳಿಕ ನಾಲ್ಕು ಘಂಟೆಗೆ ಉಪಹಾರವೂ ಆಯ್ತು. ಸಂಜೆಯಲ್ಲಿ ಒಬ್ಬನೇ ಹೊರಟನು. ಎಲ್ಲೆಲ್ಲೋ ಸುತ್ತಿಕೊಂಡು ಹೊಳೆಯಬಳಿಗೆ ತಲಪಿದನು. ಅಲ್ಲಿ ಗಂಗಾರಾಮನ ದರ್ಶನವೂ ದೊರೆಯಿತು. ಆಗ ಚಂದ್ರಿಕೆಯು ಬಹುರಮಣೀಯವಾಗಿದ್ದಿತು. ಇಬ್ಬರೂ ಅಲ್ಲೇ ಒಹಳಹೊತ್ತು ಮಾತಾಡುತ್ತಿದ್ದರು. ಉಪನಯನದ ಏರ್ಪಾಡೆಲ್ಲಾ ತಿಳಿದು ರಾಮಚಂದ್ರನಿಗೆ ತೃಪ್ತಿಜನಕವಾಯ್ತು. ಬಳಿಕ ಎದ್ದು ಮನೆಯ

ಕರೆ ಬರುವುದರಲ್ಲಿದ್ದರು. ಅಷ್ಟರಲ್ಲೇ ಇಂದಿರೆಯು ಕೇಳಿದಳು. 'ಅಯ್ಯೋ! ಮಗು ಎಲ್ಲಿ ಹೋದನೋ! ಇಷ್ಟುಹೊತ್ತಾದರೂ ಬರಲಿಲ್ಲವಲ್ಲಾ! ಇನ್ನೇ ನುಗತಿ! ಒಬ್ಬನೇ ಹೋಗಿರುವನಲ್ಲಾ! ಈ ಅವೇಳೆಯಲ್ಲಿ ಆ ಅರಳೀಮರದ ಹತ್ತಿರಕ್ಕೆ ಹೋಗುವನೋ ಏನೋ? ಅಲ್ಲಿ ಬ್ರಹ್ಮರಾಕ್ಷಸ ಇದೆಯಂತೆ! ಅಥವಾ ಅವನಿಗೇನು ಕೋಪಬಂದಿತೋ! ಯಾರೇನು ಹೇಳಿದರೊ! ಅಯ್ಯೋ!' ಎಂದು ಗೋಳಾಡುತ್ತಬಂದಳು. ಬಾಗಿಲಲ್ಲಿ ನಿಂತಳು ಬೀದಿಯಕಡೆಯೇ ನೋಡುವಳು. ಕಂಡಕಂಡವರನ್ನೆಲ್ಲಾ ಕೇಳುವಳು. ಇದೇ ಸಂಗತಿಯನ್ನು ವಿಚಾರಿಸಲಿಕ್ಕೂ, ಬಹುದಿನಕ್ಕೆ ಬಂದಿರುವ ರಾಮ ಚಂದ್ರನನ್ನು ನೋಡುವುದಕ್ಕೂ ಹಲವರು ಬಂದರು. ಆಗ್ಗೆ ಸರಿಯಾಗಿ ಸೀತಾಕಾಂತನೂ ಮನೆಗೆ ಬಂದನು. ಸಂಗತಿಯನ್ನೆಲ್ಲಾ ವಿಚಾರಿಸಿದನು. ಮರುದಿನ ಬೆಳಿಗ್ಗೆ ಬಂದು ನಿದಾನವಾಗಿ ಗೆಳೆಯನನ್ನು ನೋಡಬಹುದೆಂದು ಜನರಿಗೆ ಹೇಳಿಕಳುಹಿಸಿದನು. ಏನೂ ಗಾಬರಿಗೊಳ್ಳಬೇಕಾದುದಿಲ್ಲವೆಂದು ಪತ್ನಿಯನ್ನು ಸಂತೈಸಿದನು ಇಬ್ಬರೂ ಒಳಕ್ಕೆ ಹೊರಟರು ಉತ್ತರ ಕ್ಷಣದಲ್ಲೇ ರಾಮಚಂದ್ರನು ಮನೆಗೆ ಬಂದನು. ಕೋಲಾಹಲವು ಶಾಂತ ವಾಯಿತು.

ಇಂದಿರೆಯು ಪುತ್ರನಸಂಗಡ ತನ್ನ ವ್ಯಸನವನ್ನು ಹೇಳಿಕೊಳ್ಳಬೇಕು. ಸಮಯವೇ ಇಲ್ಲ ಯಜಮಾನರಿಲ್ಲದಾಗ ಹುಡುಗನು ಮನೆ ಸೇರುವುದೇ ಕಷ್ಟ. ಇದ್ದರೂ ಗೆಳೆಯರ ಗುಂಪು. ಏನುಮಾಡಬೇಕು! ಕಡೆಗೆ ಹೇಗೋ ಸ್ವಲ್ಪ ಅವಕಾಶ ದೊರೆಯಿತು.

ಮಗು, ನೋಡಿದೆಯೇನಪ್ಪ, ಅವರುಮಾಡಿದ ಕೆಲಸ? ಇದುಸರಿಯೆ? ಆಗಬಹುದೆ? ನೀನೇನೋಡು.

ರಾಮಚಂದ್ರ—ಏನಮ್ಮ ಅದು?

ಇಂದಿರೆ—ಲಗ್ನವು ಸಮಾಪಿಸಿತು ಬಂದಂದರೊಂದು ಆಣಿಯಾಗ ಲಿಲ್ಲವಲ್ಲಪ್ಪ. ನಾನೇನು ಮಾಡಲಿ? ಮಾನಾಬಿಳಿಯುವುದು ಹೇಗೆ?

ರಾಮಚಂದ್ರ—ಓಹೋ! ಉಪನಯನದ ವಿಷಯವೊ? ನಿನಗೇ ನಮ್ಮ? ಸುಮ್ಮನಿರು. ಎಲ್ಲಾ ಸರಿಯಾಗಿ ನಡೆದುಹೋಗುವುದು.

ತಾಯಿ—ಇಲ್ಲವೋ ಮಗು. ಶಾಸ್ತ್ರಕ್ಕಾಗಿ ಅಷ್ಟು ಮಾಡುವಕಡೆ ಇಷ್ಟಾ

[illegible] ಬಲ್ಲನು. ಕಾಲದೇಶಧರ್ಮಗಳನ್ನರಿಯದೆ ಒಳ್ಳೇ [illegible] ನಡೆಯುವ ಮಾತೆಯ ಮೂರ್ಖತನವೂ ಇವನಿಗೆ ಗೊತ್ತು. ಆದರೂ ಆಕೆಯಲ್ಲಿ ಪೂಜ್ಯಬುದ್ಧಿಯನ್ನಿಟ್ಟಿದ್ದನು.

ಲಗ್ನವಿನ್ನೆರಡು ದಿನಗಳಿಗೆ ನಡೆಯಬೇಕು. ಆದಿನ ಸಂಜೆ ನಾಲ್ಕು ಘಂಟೆಗೆ ಜೋಡೆತ್ತಿನಗಾಡಿಯೊಂದು ಒಂದು ಬಾಗಿಲಲ್ಲಿ ನಿಂತಿತು. ಮೊದಲೇ ನಿಶ್ಚಯವಾಗಿದ್ದಂತೆ ಅದರಲ್ಲಿ ಲಗ್ನದಮನೆಯ ಮತ್ತು ಗಂಗಾರಾಮನ ಮನೆಯ ಸ್ತ್ರೀಯರು, ಆಹೂತರಾಗಿದ್ದ ಮತ್ತೆ ಮೂವರು ಸುಮಂಗಲಿಯರು, ಇಷ್ಟು ಜನರುಮಾತ್ರ ಕುಳಿತರು. ಮತ್ತೊಂದು ಬಂಡಿಯಲ್ಲಿ ಉಪ್ಪುಗೂಡಿ ಒಂಬತ್ತು ಪದಾರ್ಥಗಳೂ ಸೇರಲ್ಪಟ್ಟವು. ವಟು, ತಂದೆ, ಗಂಗಾರಾಮ ಇನ್ನು ಕೆಲವರು ಪಾದಚಾರಿಗಳಾಗಿಯೇ ಬಂಡಿಯ ಹಿಂದೆ ಹೊರಟರು. ಸುಮಾರು ಒಂದೇ ಘಂಟೆಯಲ್ಲಿ ಪರ್ವತದ ಪಾದವನ್ನು ಮುಟ್ಟಿದರು. ಬೆಟ್ಟವು ಕೇವಲ ಎತ್ತರವಿಲ್ಲ ಆದರೆ ಮೆಟ್ಟಲುಗಳೇನೋ ಕಡಿದೇ. ಹೋಗಿದ್ದವರೆಲ್ಲಾ ತಮ್ಮ ಕೈಲಾದಮಟ್ಟಿಗೂ ಸಾಮಾನುಗಳನ್ನು ಹೊಲಕೊಳ್ಳುತ್ತಿದ್ದರು. ಭಾರವಾದ ಮೂಟೆಗಳನ್ನು ಬಂಡಿಗಳವರು ಹೊತ್ತರು.

ಗಂಗಾರಾಮನ ಸಲಹೆಯಂತೆ ಕೇವಲ ಹತ್ತಿರದ ಸಂಬಂಧದ ಬಂಧುಗಳಿಗೆ ಮಾತ್ರ ಲಗ್ನಪತ್ರಿಕೆಯು ಕಳುಹಿಸಲ್ಪಟ್ಟಿತು. ಎದುರಿಗೆ ಬಂದು ಕರೆಯಲಿಲ್ಲವೆಂದೂ ತಾವು ಎಂದರೆ ಅಷ್ಟು ಉದಾಸೀನವೇ ದೂ ಆಕ್ಷೇಪಿಸುತ್ತ ಕೆಲವರು ಬರದಯೇ ನಿಂತರು. ಇನ್ನು ಕೆಲವರು ಏನೇನೋ ನೆಪಗಳನ್ನು ಹೇಳಿ ತಾವು ಬರುವುದಕ್ಕೆ ಯತ್ನವಿಲ್ಲವೆಂದು ಬರೆದರು. ಇಂದಿರೆಯ ತಮ್ಮನಾದ ವಿದ್ಯಾಪ್ರಮೋದನು ತನ್ನ ಅಂಚೆಯ ಇಲಾಖೆಯವರಿಂದ ರಜಾಕ್ಕೆ ಅನುಜ್ಞೆಯಾಗಲಿಲ್ಲವೆಂದೂ ಬರೆದು, ಮೊದಲನೀರ ವಿಚಾರದಲ್ಲಿ ಅಕ್ಕನಿಗೆ ಓದಿಸಲಿಕ್ಕೆಂದು ಹದಿನೈದು ರೂಪಾಯಿಗಳನ್ನು ಕಳುಹಿಸಿದನು. ಇದನ್ನು ತಿಳಿದ ಇಂದಿರೆಯ ಮನಸ್ಸು ಉಕ್ಕಿದ ಕಡಲಿನಮೇಲೆ ಎಣ್ಣೆಯನ್ನು ಸುರಿದಂತೆ ಸ್ವಲ್ಪಮಟ್ಟಿಗೆ ಶಾಂತವಾಯಿತು.



# ಒಂಬತ್ತನೆಯ ಪ್ರಕರಣ.

ಲಗ್ನಕ್ಕೆ ಬೇಕಾದ ಸಕಲ ಸಂಭಾರಗಳೂ ಸಿದ್ಧವಾದವು. ನಾಂದಿಗ್ರಹ ಯಜ್ಞಗಳಾಗುವ ದಿನ. ಬೆಳಗ್ಗೆ ಹತ್ತುಘಂಟೆ. ಪುಣ್ಯವಶಾತ್ ಭ್ರಮರಾಂಬೆಯೂ ಪತಿಸಮೇತಳಾಗಿ ಬಂದಿಳಿದಳು. ಆಗ ಇಂದಿರೆಯ ಮನಸ್ಸು ಶಾಂತವಾಯಿತು. ಲೋಕದಲ್ಲಿ ಸುಖದುಃಖಗಳ ವೇಳೆಗಳಲ್ಲಿ ಆಪ್ತರೂ ಆನುಬಂಧಿಗಳೂ ಸಮೀಪದಲ್ಲಿರಲೇಬೇಕೆಂಬರು. ಯಾಕೆಂದರೆ, ಇವರ ಸಾನ್ನಿಧ್ಯದಿಂದ ಸುಖಸಂತೋಷಗಳು ಹೆಚ್ಚುವವು. ಮತ್ತು ದುಃಖವು ತಗ್ಗುವುದು. ಉಪನಯನಲಗ್ನವು ವಟುವಿಗೆ ಶ್ರೇಯಸ್ಕರವಾದೊಂದು ಶುಭಕರ್ಮ. ಇಂತಹ ಸಂತೋಷಸಮಯದಲ್ಲಿ ತಮ್ಮ ಸಾಕ್ಷಾತ್ ಮಗಳೇ ಬಾರದಿದ್ದರೆ ಮನಸ್ಸಿಗಸಮಾಧಾನವಾಗುವುದು ಸ್ವಾಭಾವಿಕವೇ. ಇಂದಿರೆಯಾದರೋ ಮಗಳನ್ನು ಬಿಟ್ಟು ನಡೆಯಿಸಿದರೆ ಮುಂಜಿಯಕರ್ಮವೇ ಸಾಂಗವಾಗದೆ ಲೋಪದೋಷಯುಕ್ತವಾಗುವುದೆಂದು ನಂಬಿದಳು. ಈಗ ಈಕೆಗುಂಟಾದ ಆನಂದಕ್ಕೆಣೆಯೇ ಇಲ್ಲ

ಇಂದು ಏವರು ಬ್ರಾಹ್ಮಣರಿಗೆ ಮಾತ್ರ ಆಹ್ವಾನ. ಶುಕ್ಲವೃತ್ತಿಯ ನರಹರಿಜೋಯಿಸನೂ ಭೋಜನಮಾತ್ರಕ್ಕೆ ಪುರಸ್ಕಾರವನ್ನು ಪಡೆದನು. ಪೌರೋಹಿತ್ಯದ ವಿಚಾರವನ್ನೇ ಪ್ರಸ್ತಾಪಿಸದಿದ್ದುದು ಈತನಿಗೆ ಕೇವಲ ಕೋಪಾವಹವಾಯಿತು. ಆದುದರಿಂದ ಅಲ್ಲಿಗೆ ಭೋಜನಕ್ಕೆ ಹೋಗುವ ದಕ್ಕೂ ಮನಸ್ಸಿಲ್ಲ. ಬಿಡುವುದೆಂದರೆ ಬಾಯಿನೀರು ಕರೆಯುತ್ತಿರುವುದು ಏನುಮಾಡಬೇಕು! ಆದರೂ ಪೌರೋಹಿತ್ಯಕ್ಕೆ ತನ್ನ ಮಾತಿಲ್ಲದೆ ಯಾವ ಗಂಡು ಬರುವನೋ ನೋಡೋಣವೆಂದು ಅದನ್ನು ಪರೀಕ್ಷಿಸುವುದಕ್ಕಾಗಿ ಯೂ ಹೋದನು ಗುಡಿಯಲ್ಲಿ ದಿವ್ಯವಾದ ತಳಿರತೋರಣ, ಮತ್ತು ಚೆಲುವಾದ ಚಪ್ಪರ ಸಿದ್ಧವಾಗಿದ್ದುವು. ಆದರೆ ಓಲಗದ ಸದ್ದೇ ಇಲ್ಲ. ಒಳಗೆ ಬಂದು ನೋಡುವಲ್ಲಿ ಗಂಗಾರಾಮನ ಪೌರೋಹಿತ್ಯ. ಯಥಾವಿಧಿಯಾಗಿ ಕರ್ಮವು ನಡೆಯುತ್ತಿರುವುದು ತಾಯ್ತಂದೆಗಳೂ ವಟುವೂ ಹಸೆಯಮೇಲೆ ಕುಳಿತಿರುವರು ಹಿಂದೆಹೇಳಿದ ಬ್ರಾಹ್ಮಣರು, ಸುಮಂಗಲಿಯರು ಇವರೇ ಸಭಿಕರು. ನವಗ್ರಹಧಾನ್ಯದಾನವನ್ನು ಮಾಡುವಾಗ ಶನಿಪ್ರೀತಿಕರವಾದ

ಎಳ್ಳೂ, ಮೃತ್ಯುಂಜಯಪ್ರೀತಿಕರವಾದ ಉಪ್ಪೂ ಈಜೋಯಿಸನಿಗೆಕೊಡಲ್ಪಟ್ಟವು. ಈತನಿಗೆಂತಹ ದುರ್ದಾನವಾದರೂ ಹೆಚ್ಚು ದಕ್ಷಿಣೆಬಂದರೆ ತೃಪ್ತಿ. ಇದನ್ನು ಹಲವರು ಬಲ್ಲರು. ಆದರೂ ಈ ಜೋಯಿಸನ ಮನಸ್ಸು ಇಷ್ಟಕ್ಕೇ ತೃಪ್ತವಾಗುವಂತಹ ಅಲ್ಪವಲ್ಲ. ತನಗೆ ಪೌರೋಹಿತ್ಯವು ಸಿಕ್ಕಲಿಲ್ಲ, ಓಲಗದವರ ದಳ್ಳಾಳಿಯೂ ದೊರೆಯಲಿಲ್ಲ ಎಂದು ಬಹಳ ವ್ಯಸನಪಟ್ಟನು. ಇಂದಿನ ಯಾಜ್ಞಿಕವೆಲ್ಲಾ ಮುಗಿಯಿತು ಮುತ್ತೈದೆಯರು ಮಂಗಳಸ್ವರದಿಂದ ಹಾಡುಗಳನ್ನು ಹೇಳುತ್ತ ಆರತಿಯನ್ನೆತ್ತಲು ಬಂದರು. ಕುಚೇಷ್ಟೆಯಿಂದ ಮುಂಜಿಯ ಮನೆಯವರನ್ನು ಅವಮಾನಗೊಳಿಸಲು ಇದೇ ಸಮಯವೆಂದು ಈ ಜೋಯಿಸನು ಗಟ್ಟಿಯಾಗಿ "ಯಾರೋ ಅಲ್ಲಿ, ಓಲಗಮಾಡಿರೂ" ಎಂದನು ಚತುರನಾದ ವಟುವು ಥಟ್ಟನೆ—"ಜೋಯಿಸರೇ, ಅಡಿಗೆಯಾಗಿದೆ. ಇನ್ನೇನು ಎಲೆ ಹಾಕುತ್ತಾರೆ. ಕೂಗಿಕೊಳ್ಳಬೇಡಿ" ಎಂದನು ಜೋಯಿಸನು ತಲೆಯನ್ನು ತಗ್ಗಿಸಿದನು. ಸರ್ವರಿಗೂ ಸಕಾಲದಲ್ಲಿ ಮೃಷ್ಟಾನ್ನ ಭೋಜನವಾಯ್ತು

ಮಾರನೆಯದಿನ ಉಪನಯನಮುಹೂರ್ತ. ಸಮಿಧೆ, ಅಕ್ಕಿ, ತುಪ್ಪ, ಹಿಟ್ಟು, ಯಜ್ಞೋಪವಿತ, ದರ್ಭೆಮೊದಲಾದವೆಲ್ಲಾ ಅಣಿಯಾದವು. ಚೌಲ ಸಪ್ತಿಯ ಭೋಜನಕ್ಕೋಸ್ಕರ ಪಂಚಭಕ್ಷ್ಯಗಳ ಅಡಿಗೆಯು ಸಿದ್ಧವಾಯ್ತು. ಮಾತಾಪಿತೃಗಳೂ ವಟುವೂ ಮಂಗಳಸ್ನಾನವಾದನಂತರ ಯಜ್ಞವೇದಿಕೆಯನ್ನೇರಿದರು. ಆಚಾರ್ಯಪದವಿಯನ್ನಲಂಕರಿಸಿದ ಗಂಗಾರಾಮನು ಋತ್ವಿಕ್ಕುಗಳೊಡನೆ ಯಾಜ್ಞಿಕಕ್ಕೆ ಪ್ರಾರಂಭಿಸಿದನು. ಪ್ರತಿಯೊಂದು ಸಂದರ್ಭದಲ್ಲೂ ರಾಮಚಂದ್ರನು, ಹಾಗೆಂದರೇನು, ಇದನ್ನೇಕೆ ಮಾಡಬೇಕು ಎಂದು ಆಚಾರ್ಯನನ್ನು ಪ್ರಶ್ನಿಸುತ್ತಾಬಂದನು. ಅದಕ್ಕಾತನು ಆಗಲೇ ಉತ್ತರಗಳನ್ನು ಹೇಳುತ್ತಾಹೋದರೆ ಸಕಾಲಕ್ಕೆ ಲಗ್ನಸಾಧನೆಯಾಗುವುದು ಕಷ್ಟವೆಂದೂ ಬಳಿಕ ಎಲ್ಲವನ್ನೂ ವಿವರಿಸುವುದಾಗಿಯೂ ಹೇಳಿದನು. ತರುವಾಯ ಚೌಲ, ಕಂಕಣಬಂಧನ, ಹವನಹೋಮಗಳು ನಡೆದವು. ಯಜ್ಞೋಪವೀತದಾನಧಾರಣೆಗಳ ಸಮಯ. ಇನ್ನು ಪುನಃ ಅಲ್ಲಿಗೆ ಹೋಗಲೇಬಾರದೆಂದು ಹಿಂದಿನ ದಿನವೇ ಮನದಲ್ಲಿ ಶಪಥಮಾಡಿಕೊಂಡಿದ್ದ ಜೋಯಿಸನು ಮತ್ತೆ ಚಾಪಲ್ಯದಿಂದ ದಾನದಕ್ಷಿಣೆಗಳನ್ನಾದರೂ ಪಡೆಯೋಣವೆಂದೂ ಚಿನ್ನದ

ಜನಿವಾರದ ವಿಷಯವೇನಾಯ್ತೋ ತಿಳಿಯಬೇಕೆಂದೂ ಬಂದನು ಲಗ್ನದ ವೇಳೆಗೆ ಸಭಾಪೂಜೆಗೆ ಬರಬೇಕೆಂದು ಆ ಗ್ರಾಮದ ಸಭಾಮಂಡಲಿಗೆಲ್ಲಾ ಸಭಾಮುದ್ರೆಯಮೂಲಕ ಹೇಳಿಕಳುಹಿಸಿದ್ದರು. ಅನೇಕರು ಬರಲಿಲ್ಲ. ಮೊದಲನೆಯದಿನ ಕರೆಯಲ್ಪಟ್ಟಿದ್ದವರು ವಿನಾ ಉಳಿದವರೆಲ್ಲಾ ಎಂಟು ಹತ್ತಕ್ಕಿಂತ ಹೆಚ್ಚಾಗಿರಲಿಲ್ಲ. "ಊಟಕ್ಕೆಕೂಡ ಕರೆಯಲಿಲ್ಲ, ಬರೀ ಎಲೆಯಡಕೆ ಮೂರುಕಾಸು ದಕ್ಷಿಣೆಯ ಆ ಮಹಾಸಂಪತ್ತಿನ ಮುಂಜಿಗೋಸ್ಕರ ಅಷ್ಟುದೂರಹೋಗುವವರಾರು?" ಎಂದು ಕೆಲವರೂ, "ಆ ಪರದೇಶಿ ಮುಂಜಿಗೇಕೆ ಹೋಗಬೇಕು, ಹೊಟ್ಟೆತುಂಬ ಸುಖವಾದ ಊಟವಿಲ್ಲ. ಕೈ ತುಂಬ ದಕ್ಷಿಣೆಯಿಲ್ಲ," ಎಂದು ಕೆಲವರೂ, "ಮುಯ್ಯೋದಿಸುವುದೇ ತಪ್ಪಿತು." ಎಂದು ಕೆಲವರೂ, ಊರಿಗುಂಟಾದ ದೊಡ್ಡಮನುಷ್ಯ, ನಮ್ಮನ್ನೆಲ್ಲಾ ಊಟಕ್ಕೆ ಕರಯದೆ ಮುಂಜಿಮಾಡುವನಂತೆ ಏನು ಲಕ್ಷಣವೊ! ಎಂದು ಕೆಲವರೂ, 'ಲಕ್ಷಣವಾಗಿ ಅಗ್ರಹಾರದ ಬ್ರಾಹ್ಮಣರನ್ನೆಲ್ಲಾ ಕರೆದು ಬ್ರಹ್ಮಭೋಜನವನ್ನು ಮಾಡಿಸದಿದ್ದರೆ ಅದೆಂತಹ ಬ್ರಹ್ಮೋಪನಯನ!" ಎಂದು ಕೆಲವರೂ ಹೀಗೆ ಬಗೆಬಗೆಯಾಗಿ ಆಕ್ಷೇಪಿಸುತ್ತಲೂ ಚರ್ಚಿಸುತ್ತಲೂ ಅಗ್ರಹಾರದ ಬ್ರಾಹ್ಮಣರಲ್ಲನೇಕರು ಮಠಮುದ್ರೆ ಶಿವದತ್ತಶೇಖರನ ಬಳಿಗೆ ಹೋಗಿ ಬಹಳವಾಗಿ ಆರ್ಭಟಿಸಿದರು. ಆತನಿಗೀಗ ಹತ್ತುಜನರ ಆಕ್ಷೇಪಣೆಯೂ ಒತ್ತಾಸೆಯಾಗಲು "ಏನುಸ್ವಾಮಿ ಈ ಅನ್ಯಾಯ! ಮಠಕ್ಕೆ ಪ್ರತಿನಿಧಿ, ಮುಮ್ಮನುಷ್ಯ, ಇಂತಹ ನನಗೇ ಬಂದುಕುತ್ತು ಅನ್ನವಿಲ್ಲ, ಪಂಗನಾಮ! ಅಲ್ಲ, ಕ್ಷಮಿಸಿ, ಆವನ ಮನೆಯ ಅನ್ನಕ್ಕೆ ನಾನೇನು ಗತಿಗೆಟ್ಟಿದ್ದೇನೆಯೆ? ಮರ್ಯಾದೆಗೆ. ಏನು ಮಹಾವಿಷಯ! ಇರಲಿ. ಒಳ್ಳೆಯದು, ಅವನು ಮುಂಜಿಯನ್ನು ಮಾಡಲಿ. ನನ್ನ ಮಠಮುದ್ರೆತನದ ಕೈವಾಡವನ್ನು ತೋರಿಸುವೆನು. ಇನ್ನು ಎಂಟು ದಿನಗಳೊಳಗಾಗಿ ಅವನ ಗತಿ ಏನಾಗುವುದೋ! ನೋಡುವಿರಂತೆ!" ಎಂದನು. ಅಷ್ಟರಲ್ಲೇ ಚತುರ್ವೇದಿಯೆಂಬಾತನು ಬಂದು "ಸ್ವಾಮಿ, ಸೀತಾಕಾಂತನೇನು ಮಾಡಬಲ್ಲ! ಪಶುಪ್ರಾಣಿ. ಇದೆಲ್ಲಾ ಆ ಮನೆಹಾಳ ಮಹೀಜಸಾದ ಗಂಗಾರಾಮನ ಕರ್ಕೋಟಕತನ. ಆ ಪಾಪಿಯು ಈ ಪೂರಿಗೆ ಬಂದುಸೇರಿದಂದಿನಿಂದಲೂ ಅಗ್ರಹಾರದ ಕಟ್ಟುಪಾಡುಗಳೆಲ್ಲಾ ಸಡಿಲವಾದುದಲ್ಲಾ! ಮುಂದೇನುಗತಿ! ಹೇಗಾದರೂ

ಆ ದುರ್ಗುಣವನ್ನು ಆಹುತಿತೆಗೆದುಕೊಳ್ಳಬೇಕು.'' ಎಂದನು. ಇನ್ನು ಕೆಲವರು '' ಯಾರೋ ತವುಗೆ ಬೇಕಾದ ಕೆಲವು ಮನೆಗಳವರನ್ನು ಊಟಕ್ಕೆ ಕರೆದಿರು ವರಂತೆ, ಹಾಗೆ ಊಟಕ್ಕೆ ಹೋಗಿರತಕ್ಕವರಿಗೂ ಪ್ರಾಯಶ್ಚಿತ್ತವಾಗಬೇಕು!'' ಎಂದು ಆರ್ಭಟಿಸಿದರು. ಮಠಮುದ್ರಿ—'' ಆಗಲಿ, ನಾನಂತೂ ಹೋಗು ವುದಿಲ್ಲ. ನಾನು ಹೋಗದಿದ್ದರೆ ಸಭಾಪೂಜೆಯೇ ಇಲ್ಲ ಅಂತಹ ಕಷ್ಟ ಅನ್ನಾ ತಿಂದವರು, ಲಗ್ನವನ್ನು ಮಾಡಿಸಿದವನು, ಪ್ರಸ್ತುದ ಯಜಮಾನ, ಎಲ್ಲರೂ ಬಯಲಿಗೆ ಬರಬೇಡವೆ? ನೋಡುವಿರಂತೆ ಅದರ ಮಝ!'' ಎಂದು ಗರ್ಜಿಸಿದನು. ಇನ್ನೊಬ್ಬನು '' ಅಯ್ಯೋಪಾಪ, ಅವನನ್ನೇತಕ್ಕೆ ಗೋಳಾಡಿಸುವಿರಿ? ಇಲ್ಲಿ ಲಗ್ನಮಾಡಲು ಚೈತನ್ಯಸಾಲದು. ಸೀತಾಕಾಂತನು ದೇವತಾಸನ್ನಿಧಿಯೆಂಬ ಕುಂಟುನೆಪವನ್ನು ಹೇಳಿ ಹೇಗೋ ಕಾಲವನ್ನು ತಳ್ಳುವನಪ್ಪ, ವೃಥಾ ಏಕೆ ಆಕ್ಷೇಪಿಸುವಿರಿ ?'' ಎನಲು ಪುನಃ ಮಠಮುದ್ರಿ ರೇಗಿ ' ಆ, ಏನೆಂದೆ ? ಆಕ್ಷೇಪಣೆಯೆ ? ಅಷ್ಟರಲ್ಲೇ ಪರ್ಯವಸಾನವೆ ? ನೋಡು, ಬಹಿಷ್ಕಾರ ಹಾಕಿಸದಿದ್ದರೆ ನಾವೇತಕ್ಕಾದೇವು ? ನಮ್ಮಲ್ಲೆಲ್ಲಾ ಅವನು ಬಂದು ಗದುಕುವದಿಲ್ಲವೆ ? ಗತಿಯಿಲ್ಲದಿದ್ದರೆ ಸಾಲಾವಾಡಲಿ ಮನೆಬಾಗಿಲು ಯಾಲಾ ಹಾಕಲಿ. ನಮಗೇನಂತೆ!'' ಎಂದು ಗಟ್ಟಿಯಾಗಿ ಕೂಗಿಕೊಂಡನು.

ಹೀಗೆ ಚರ್ಚೆಯಾಗುತ್ತಲಿದೆ. ಇಷ್ಟರಲ್ಲೇ ನರಹರಿಜೋಯಿಸನು ಬೆಟ್ಟ ದಿಂದ ಬಂದು ಇವರ ಜತೆಗೆ ಸೇರಿಕೊಂಡು ''ಏನು ಸ್ವಾಮಿ ! ಏನುಲಗ್ನ ' ಒಲಗದವರೇ ಇಲ್ಲ. ಹೀಗುಂಟೆ ? ನೀವೆಲ್ಲಾ ಅಲ್ಲಿಗೆ ಹೋಗಿದ್ದೀರೇನೋ ಎಂದು ನಾನು ಅಲ್ಲಿಗೆ ಹೋಗಿದ್ದೆ. ಏನೂ ಸ್ವಾರಸ್ಯವಿಲ್ಲಕಾಣೆರಿ. ನನಗೂ ಆರುಕಾಸು, ಒಂದು ಜನಿವಾರ ಕೈಲಿಕ್ಕಿದರು. ನಾನವರ ಮನೆಗೆಷ್ಟು ಕಷ್ಟಪಟ್ಟಿದೇನೆ ಗೊತ್ತೆ? ಯಾರಮನೆಗೆ ತಪ್ಪಿದರೂ ಅವರ ಮನೆಗೆ ನಿತ್ಯವೂ ನಿತ್ಯಾತ್ರಿಗೆ ತಪ್ಪೆನು. ಮತ್ತು ಮುಂಜಿಯ ವಿಷಯವನ್ನು ಪದೇಪದೇ ಎಚ್ಚರಿಸುತ್ತಲೇ ಇದ್ದೆನು. ನೆಚ್ಚಿದೆಮ್ಮೆ ಕೋಣನನ್ನೀದಂತಾಯಿತು. ಧರ್ಮವೇ ಜಯ. ಇನ್ನೊಂದು ವಿಷಯ, ನೋಡಿರಿ. ಮಠದಪ್ರತಿನಿಧಿ ಗಳಾದ ಮಹನೀಯರನ್ನು ಬಿಟ್ಟು ಸಭಾಪೂಜೆ ಮಾಡಿಬಿಟ್ಟರಲ್ಲಾ ! ಎಷ್ಟು ಧೈರ್ಯ! ನಮ್ಮ ಸರಪೀಯಾಚಾರ್ರು, ಶರಕೋಪಯ್ಯಂಗಾರ್ರು ಇಲ್ಲದಿದ್ದರೂ

ಮುಕತ್ರಯದ ತಾಂಬೂಲವನ್ನಿತ್ತುಬಿಟ್ಟರಲ್ಲಾ ! ಇಂತಹ ಅನ್ಯಾಯವುಂಟೆ? ಅಯ್ಯೋ ! ಕಾಲಕೆಟ್ಟುಹೋಯಿತು'' ಈರೀತಿಯಾಗಿ ಬಹಳ ಹೊತ್ತಿನ ವರೆಗೂ ಆಕ್ಷೇಪಣೆಗಳೂ ಚರ್ಚೆಗಳೂ ಬಗೆಬಗೆಯಾಗಿ ನಡೆದುವು. ಕಡೆಗೆ ಅಗ್ರಹಾರಿಕರಲ್ಲಿ ಸೀತಾಕಾಂತನ ಮನೆಯವರನ್ನೂ ಆ ಉಪನಯನಕ್ಕೆ ಹೋಗಿದ್ದ ಬ್ರಾಹ್ಮಣರೆಲ್ಲರನ್ನೂ ಸವ್ಯವಹಾರಕ್ಕೆ ಸೇರಿಸಕೂಡದೆಂದು ಕಟ್ಟು ಮಾಡಿಬಿಟ್ಟರು. ಇದನ್ನನುಮೋದಿಸುವುದರಲ್ಲಿ ನಮ್ಮ ನರಹರಿಜೋಯಿಸನೂ ಅಗ್ರಗಣ್ಯನೆಂಬುದನ್ನು ನಾವರಿತೇ ಇರುವೆವು.

ಅತ್ತ ಉಪನಯನಮುಹೂರ್ತವು ಸುಲಲಿತವಾಗಿ ನೆರವೇರಿತು. ಘಂಟಾನಾದದ ಶುಭವಾದ್ಯಧ್ವನಿಯ ಜತೆಯಲ್ಲಿ ತಂದೆಯಿಂದ ಬ್ರಹ್ಮೋಪದೇಶವೂ ಆಯಿತು. ದೀಕ್ಷಾವಸ್ತ್ರಕ್ಕೆ ಅರಿಸಿನದಪಂಚೆ, ಮೌಂಜೀಮೇಖಲೆ, ಪಲಾಶದಂಡ, ಕೃಷ್ಣಾಜಿನದ ತುಂಡು, ಗೋಪೀಚಂದನ ಇಂತಹ ಶಾಸ್ತ್ರೋಕ್ತವಸ್ತುಗಳ ಹೊರತು ಜೋಮಾಲೇಸರ, ಕಾಲ್ಗಡಗ ಮೊದಲಾದ ಸ್ತ್ರೀಯರ ಯಾವ ಮುದ್ದಿನ ಒಡವೆಗಳನ್ನೂ ವಟುವಿಗಲಂಕರಿಸಿಲ್ಲ. ಆದರೂ ಅವನ ಮುಖದಲ್ಲಿ ದಿವ್ಯವಾದ ವರ್ಚಸ್ಸು ಶೋಭಿಸುತ್ತಿದ್ದಿತು. ಮಾತೃಭಿಕ್ಷೆಯಾದ ನಂತರ ಇತರ ಸುಮಂಗಲಿಯರು ಒಂದು ಭಿಕ್ಷವನ್ನು ನೀಡಿದರು. ಬೆಳ್ಳಿಯ ಬಟ್ಟಲಿಲ್ಲದೆ ಸಾಮಾನ್ಯವಾದ ಹಿತ್ತಾಳೆ ಬಟ್ಟಲಲ್ಲೇ ಭಿಕ್ಷವನ್ನಿತ್ತುದು ದಾಯ್ತು. ಕರ್ಮಕ್ಕೆ ಈಷತ್ತೂ ಲೋಪವಿಲ್ಲ. ಶಾಸ್ತ್ರೋಕ್ತರೀತಿಯಿಂದ ಎಲ್ಲವೂ ಸಾಂಗವಾಗಿ ಸಾಗಿತು. ಇಷ್ಟಕ್ಕೂ ಉಚಿತಜ್ಞನೂ ವಿದ್ವಾಂಸನೂ ಆದ ಗಂಗಾರಾಮನ ಸಲಹೆಗಳು ಸೀತಾಕಾಂತನ ದೃಢಪ್ರತಿಜ್ಞೆ, ಹುಡುಗನ ತಿಳಿವಳಿಕೆ ಇವೇ ಮುಖ್ಯಕಾರಣಗಳು. ಈ ಶುಭಕರ್ಮವು ಮಂತ್ರದಲ್ಲಿ ಚಾಚೂತಪ್ಪದೆ ಲಕ್ಷಣವಾಗಿ ನಡೆದುದನ್ನು ನೋಡಿ ಇಂದಿರೆಯು ಕಡೆಗೆ ಬಾಗಿನದ ಯೋಚನೆಯನ್ನು ಕೂಡ ಬಿಟ್ಟುಬಿಟ್ಟಳು. ಇಲ್ಲಿ ನೆರೆದಿದ್ದ ಸ್ತ್ರೀಯರೆಲ್ಲಾ ಗಂಗಾರಾಮನ ಮತ್ತು ಅವನಂತೆಯೇ ಸ್ವಭಾವವುಳ್ಳ ಕೆಲವರ ಸ್ತ್ರೀಯರಾದುದರಿಂದ ಇತರರಂತೆ ಕೆಲಸಕ್ಕೆಬಾರದ ಹರಟೆಗಳಿಂದ ಕುಚೇಷ್ಟೆಯ ಮಾತುಗಳನ್ನಾಡುವುದು, ದೂರುವುದು ಇಂತಹ ದುಶ್ಚೇಷ್ಟೆಗಳಿಗವಕಾಶವಿರಲಿಲ್ಲ. ಕ್ಲುಪ್ತವಾಗಿ ಆಹ್ವಾನಗೊಂಡಿದ್ದ ಬ್ರಾಹ್ಮಣರಿಗೂ ಸುಮಂಗಲಿಯರಿಗೂ ಸಕಾಲಕ್ಕೆ ಸುಖಭೋಜನಸಂತರ್ಪಣೆ ನಡೆಯಿತು. ನಾಲ್ಕು

ನೆಯದಿನ ಸ್ತಂಭಬಲಿಯ ಕರ್ಮವೂ ಸುಖವಾಗಿ ಸಾಗಿತು. ಹಿಂದೆಹೇಳಿದಂತೆ ಮೆರವಣಿಗೆಯಲ್ಲಿ ತಾಳ, ಮೇಳ, ವಾಹನ, ಪರಿವಾರ, ಮೊದಲಾದ ಆಡಂಬರವೇನೂ ಇಲ್ಲ. ಶ್ರೇಷ್ಠವಾದ ವೇದಘೋಷ ಮತ್ತು ಇಂಪಾದ ಸುಮಂಗಲಿಯರ ಮಂಗಳಗಾನ, ಇವು ಚೆನ್ನಾಗಿ ಶೋಭಿಸಿದವು. ಮಾರನೆಯದಿನ ಬೆಟ್ಟದಮೇಲೆಯೇ ಸ್ವಲ್ಪಮಟ್ಟಿಗೆ ವಿನೋದವಿಶ್ರಾಂತಿಗಳಿಂದ ಕಳೆದು ಸಂಜೆಯವೇಳೆಗೆ ಸರ್ವರೂ ಸುಖವಾಗಿ ಊರಿಗೆಬಂದು ಸೇರಿದರು.



## ಹತ್ತನೆಯ ಪ್ರಕರಣ.

ಗಂಗಾರಾಮನು ನಿತ್ಯವೂಬಂದು ವಟುವಿಗೆ ತ್ರಿಕಾಲಗಳಲ್ಲೂ ಸಂಧ್ಯಾವಂದನೆಯನ್ನೂ ಸಾಯಂಪ್ರಾತಃಕಾಲಗಳಲ್ಲಿ ಅಗ್ನಿಕಾರ್ಯವನ್ನೂ ಮಾಡಿಸುತ್ತಿದ್ದನು. ಈ ವಟುವು ಜಂಬಗಾರನೂ ಶಾಸ್ತ್ರೋಕ್ತಕರ್ಮಗಳಲ್ಲುದಾಸೀನನೂ ಅಲ್ಲ. ಮತ್ತು ಪ್ರತಿಯೊಂದಕ್ಕೂ ಕಾರಣವನ್ನು ಕೇಳತಕ್ಕ ಸ್ವಭಾವದವನು. ಒಂದುದಿನ ಬೆಳಿಗ್ಗೆ ರಾಮಚಂದ್ರನು ವೇದವನ್ನು ಹೇಳಿಕೊಡೆಂದು ಗಂಗಾರಾಮನನ್ನು ಕೇಳಿದನು. ಅದಕ್ಕಾತನು—" ಅಯ್ಯ, ನಿನಗೆ ಮೊದಲುಪಾಕರ್ಮವಾಗಬೇಕು. ಬಳಿಕ ವೇದಾಧ್ಯಯನಕ್ಕಧಿಕಾರ. ಈಗ್ಗೆ ಅಗ್ನಿಕಾರ್ಯವೊಂದೇ ಸಾಕು." ಎಂದನು.

ಸಂಧ್ಯಾವಂದನೆಯನ್ನೇಕೆ ಮಾಡಬೇಕು ?

ಮಗು, ಇದು ಬಹಳ ದೊಡ್ಡಪ್ರಶ್ನೆ, ಅಂದರೆ ದೊಡ್ಡ ಉತ್ತರವುಳ್ಳ ಪ್ರಶ್ನೆ. ಆದರೂ ಸದ್ಯಕ್ಕೆ ನಿನಗೆ ತಿಳಿಯುವಮಟ್ಟಿಗೆ ಹೇಳುವೆನು ಕೇಳು. ನಮ್ಮ ದೇಹವು ಅಥವಾ ಇಡೀಪ್ರಪಂಚವೇ ಭೂಮಿ, ನೀರು, ತೇಜಸ್ಸು, ಗಾಳಿ, ಆಕಾಶ ಎಂಬ ಪಂಚಭೂತಗಳಿಂದ ಆಗಿದೆಯಷ್ಟೆ. ಈ ಪಂಚಭೂತಗಳ ಅಭಿಮಾನದೇವತೆಗಳನ್ನು ಆರಾಧಿಸುವದು ಶ್ರೇಯಸ್ಕರ. ಸಂಧ್ಯಾವಂದನೆ, ಆಸನಶುದ್ಧಿಮಂತ್ರ, ಆಚಮನ, ಅರ್ಘ್ಯ, ಸೂರ್ಯೋಪಸ್ಥಾನ, ಪ್ರಾಣಾಯಾಮ ಇತ್ಯಾದಿಗಳಿಂದ ಈ ಆರಾಧನೆಯು ನಡೆಯುವುದು.

ಸಂಧ್ಯಾವಂದನೆಯನ್ನು ಇಂತಿಂತಹ ವೇಳೆಯಲ್ಲೇ ಮಾಡಬೇಕೆಂಬುದೇತಕ್ಕೆ ?

ದೇವರನ್ನು ಬ್ರಹ್ಮ, ವಿಷ್ಣು, ಈಶ್ವರ ಎಂಬ ತ್ರಿಮೂರ್ತಿಗಳ ರೂಪ ದಲ್ಲಿ ಸೇವಿಸುವರು. ಸೂರ್ಯನು ಬೆಳಗ್ಗೆ ಬ್ರಹ್ಮನಾಗಿಯೂ ಮಧ್ಯಾಹ್ನ ಈಶ್ವರನಾಗಿಯೂ ಸಂಜೆಯಲ್ಲಿ ವಿಷ್ಣುವಾಗಿಯೂ ಹೀಗೆ ತ್ರಿಮೂರ್ತಿಸ್ವರೂಪಿ ಯೆಂದು ನಂಬಿ ನಮ್ಮವರು ಈ ಮೂರು ವೇಳೆಗಳಲ್ಲೂ ಸೂರ್ಯಾರಾಧನೆ ಯಾದ ಸಂಧ್ಯಾವಂದನೆಯನ್ನು ಮಾಡುವೆವು.

ಹಾಗಾದರೆ ಗಾಯತ್ರಿಯೆಂಬುವುದಾವುದು ?

ಸೂರ್ಯನಲ್ಲಿರುವ ದೇವತಾಶಕ್ತಿಯನ್ನೇ ಗಾಯತ್ರೀ, ಸಾವಿತ್ರಿ ಸಂಧ್ಯಾ ಎಂದು ಪ್ರಾರ್ಥಿಸುವೆವು.

ಹಾಗಾದರೆ ಸಂಧ್ಯಾವಂದನೆಯೆಂದರೆ ಸೂರ್ಯನನ್ನು ನಿತ್ಯವೂ ವಂದಿ ಸುವುದೆಂದರ್ಥವೊ ? ನಾವು ಈ ಹಳ್ಳಿಯ ಶಾಲೆಯಲ್ಲೋದುತ್ತಿದ್ದಾಗ ನಿತ್ಯವೂ ಸಾಯಂಪ್ರಾತಃಕಾಲಗಳಲ್ಲಿ ಹಾಡುಹೇಳಿಕೊಂಡು ಸಂಧ್ಯಾವಂದನೆ ಯನ್ನು ಮಾಡುತಲೇ ಇದ್ದೆವು. ಆದರೆ ಹೀಗೆ ಪಾತ್ರೆಗಳು ನೀರು ಬೇಕಾ ಗಿರಲಿಲ್ಲ

ಹಾಗಲ್ಲ. ಈಗ ನೀನು ಮಾಡುತ್ತಿರುವ ಸಂಧ್ಯಾವಂದನೆಯು ವೇದ ವಿಹಿತವಾದುದು. ಇದರಲ್ಲಿ ವೇದಮಂತ್ರಗಳುಂಟು. ವೇದಮಂತ್ರಗಳಲ್ಲಿ ಪ್ರಭಾವಹೆಚ್ಚು.

ಸಂಧ್ಯಾವಂದನೆಯ ಮಂತ್ರಗಳರ್ಥವೇನು ?

ಈಗ ನಿನಗದು ತಿಳಿಯುವುದು ಕಷ್ಟ. ನಿನಗೆ ಸಂಸ್ಕೃತಭಾಷೆಯೂ ಬಾರದು.

ಮುಖ್ಯವಾಗಿ ಅದರ ಗುಟ್ಟನ್ನು ತಿಳಿಯಲು ನನಗೆ ಬಹಳ ಆಸೆಮಾವ. ನಾನು ಸಂಸ್ಕೃತವನ್ನು ಓದಲೆ ?

ಆಗಬಹುದು. ಭಾರತಭೂಮಿಯಲ್ಲಿ ಉತ್ತಮವಾದ ಆರ್ಯವಂಶದಲ್ಲಿ ಹುಟ್ಟಿ, ದೇವಭಾಷೆಯಾದ ಸಂಸ್ಕೃತವನ್ನು ಕಲಿಯದಿರುವುದು ನಮ್ಮ ಕುಲಕ್ಕೂ ಜನಾಂಗಕ್ಕೂ ಹೀನಾಯುವಲ್ಲವೆ? ನೀನು ಈ ರಜಾದಲ್ಲಿ ಇಲ್ಲಿರುವ ವರಿಯಂತ ನಾನು ಬೋಧಿಸುವೆನು ಮುಂದೆಯೊ ?

(ಸ್ವಲ್ಪ ಯೋಚಿಸಿ) ಓಹೋ ! ಸರಿ. ಅನುಕೂಲವೇ ಆಯಿತು ಮಾವ.

ನಿನ್ನ ಬಳಿಯಲ್ಲಿ ಈ ಎರಡು ತಿಂಗಳೂ ಚನ್ನಾಗಿ ವ್ಯಾಸಂಗಮಾಡಿ ಮುಂದೆ ಐದನೆಯ ಇಯತ್ತೆಯಿಂದ ಸಂಸ್ಕೃತಭಾಷೆಯನ್ನೇ ಐಚ್ಛಿಕವನ್ನಾಗಿ ತೆಗೆದುಕೊಳ್ಳುವೆನು.

ಬಲು ಒಳ್ಳೇಯೋಚನೆ ಈಗಿನಿಂದ ಶಾಲೆಯ ವರ್ಗಗಳಲ್ಲೇ ಸಂಸ್ಕೃತವನ್ನು ಅಲ್ಪಸ್ವಲ್ಪವಾಗಿ ಓದಿಕೊಳ್ಳುತ್ತಿದ್ದರೂ ಮುಂದಕ್ಕೆಷ್ಟೋ ಉಪಯೋಗ.

ಓಹೋ ! ಮರೆತಿದ್ದೆನು. ಅಗ್ನಿಕಾರ್ಯ. ಅನ್ಯಾಯವಾಗಿ ಹವನವೆಂದೂ ಹೋಮವೆಂದೂ ಬೆಂಕಿಗೆ ತುಪ್ಪ ಮುಂತಾದುವನ್ನು ಸುರಿದು ವ್ಯರ್ಥಪಡಿಸುವುದೇತಕ್ಕೆ ?

ಅಯ್ಯ, ಅಗ್ನಿಯೂ ಸೂರ್ಯನ ಸಂಸಾರಕ್ಕೆ ಸೇರಿದುದೇ. ಅವನು ಮರೆಯಾಗುವ ರಾತ್ರಿಯವೇಳೆಯಲ್ಲಿ ನಮ್ಮ ಜ್ಯೋತಿಗೂ ಅಡಿಗೆ ಕೆಲಸಗಳಿಗೂ ಅಗ್ನಿಯನ್ನುಪಯೋಗಿಸಿಕೊಳ್ಳುವೆವು. ಈಗಿನವರಂತು ಆವಿಯ ಯಂತ್ರಗಳಿಗಾಗಿ ಅಗ್ನಿಯನ್ನು ಎಷ್ಟುಮಟ್ಟಿಗೆ ಉಪಯೋಗಿಸುವರೆಂಬುದು ಎಲ್ಲರಿಗೂ ಗೊತ್ತೇ. ಅಗ್ನಿಯ ಮಹಿಮೆಯು ಅತಿಶಯವಾದುದು. ಇದನ್ನೂ ಮುಖ್ಯವಾದೊಂದು ದೇವತೆಯೆಂದಾರಾಧಿಸುವೆವು. ಮತ್ತು ಇತರದೇವತೆಗಳಂತಲ್ಲದೆ ಇವನು ತನಗೆ ಕೊಟ್ಟುದನ್ನು ತಕ್ಷಣವೇ ನಮ್ಮೆದುರಿಗೇ ಕಬಳಿಸಿಬಿಡುವನು. ಆದುದರಿಂದಲೇ ಇತರದೇವತೆಗಳಿಗೆ ಸಮರ್ಪಿಸುವ ಆಹುತಿಗಳನ್ನು ಅಗ್ನಿಯೇ ಆಯಾ ದೇವತೆಗಳಿಗೆ ಒಯ್ಯುವುದೆಂದು ನಮ್ಮವರು ನಂಬಿ ಇತರದೇವತೆಗಳಿಗುದ್ದೇಶಿಸಿದ ಮಂತ್ರಪೂತವಾದ ಹವಿಸ್ಸುಗಳನ್ನು ಅಗ್ನಿಯಲ್ಲಿ ಅರ್ಪಿಸುವರು.

ಮಾವಯ್ಯ, ಇಂತಹ ಹೊಸಹೊಸ ಸಂಗತಿಗಳನ್ನು ತಿಳಿದಷ್ಟೂ ಮನಸ್ಸಿಗೆಷ್ಟೋ ಹರ್ಷ

ಅಯ್ಯ, ನಿನ್ನ ಪ್ರಶ್ನೆಗಳಿಗೆಲ್ಲಾ ಈಗ ನಾನು ಹೇಳಿದಷ್ಟೇ ಉತ್ತರವಲ್ಲ. ಇನ್ನೂ ಬಹಳವುಂಟು. ನೀನು ವಯಸ್ಕನಾಗುತ್ತ ಹೆಚ್ಚು ಜ್ಞಾನವನ್ನು ಪಡೆಯುತ್ತಾ ಬಂದಂತೆಲ್ಲಾ ಅವು ಚೆನ್ನಾಗಿ ವಿಶದಪಡುವುವು. ಸಂಸ್ಕೃತ ಭಾಷೆಯನ್ನು ಕಲಿತಮೇಲೆ ಯತ್ನಿಸಿದರೆ ಇದೆಲ್ಲಾ ಕರತಲಾಮಲಕವಾಗಿ ಗೊತ್ತಾಗುವುದು.

ರಾಮಚಂದ್ರನು ಬೇಸಗೆಯ ರಜಾಮುಗಿಯುವವರೆಗೂ ಸುಂದರ ಗಿರಿಯಲ್ಲೇ ಗಂಗಾರಾಮನ ಬಳಿಯಲ್ಲಿ ಸಂಸ್ಕೃತವನ್ನು ವ್ಯಾಸಂಗಮಾಡು ತಿದ್ದನು. ಬಳಿಕ ಅಮರಪುರಕ್ಕೆ ತೆರಳಿ ಸಂಸ್ಕೃತಭಾಷೆಯನ್ನೇ ಐಚ್ಛಿಕ ವನ್ನಾಗಿ ತೆಗೆದುಕೊಂಡು ಓದುತ ಬಂದನು



## ಹನ್ನೊಂದನೆಯ ಅಧ್ಯಾಯ.

ಉಪನಯನದಮುಹೂರ್ತವು ನೆರವೇರಿದ ಹಲವು ದಿನಗಳ ಬಳಿಕ ಸುಂದರ ಗಿರಿಯ ಅಗ್ರಹಾರಿಕರಲ್ಲಿ ಹಲವರು ಮತ್ತು ಮಠಮುದ್ರೆ ಈ ಎಲ್ಲರೂ ಸೇರಿ ಒಂದು ದಿನ ಸೀತಾಕಾಂತನನ್ನೂ ಗಂಗಾರಾಮನನ್ನೂ ಕರೆಯಿಸಿದರು. ಮಠಮುದ್ರೆಯೇ ಇಲ್ಲದೆ ಸಭಾಪೂಜೆಯನ್ನು ನಡೆಯಿಸಿದುದು ಮತತ್ರಯ ದವರೆಲ್ಲರೂ ಸೇರದಿದ್ದಾಗ ಆ ತಾಂಬೂಲವನ್ನೆತ್ತಿದುದು, ಊರಿಗೆಲ್ಲಾ ಒಟ್ಟು ಬ್ರಾಹ್ಮಣ ಸಂತರ್ಪಣೆ ಮಾಡಿಸದಿದ್ದುದು, ಈ ತಪ್ಪಿತಗಳ ಶಿಕ್ಷೆಗಾಗಿ ಈ ಎರಡು ಮನೆಗಳವರನ್ನೂ ಸವ್ಯವಹಾರಕ್ಕೆ ಕರೆಯುವುದಿಲ್ಲವೆಂದು ಕಟ್ಟು ಮಾಡಿಕೊಂಡಿರುವ ಸಂಗತಿಯನ್ನು ತಿಳಿಯಿಸಿದರು. ಸೀತಾಕಾಂತನು ಕೇವಲಖಿನ್ನನಾಗಿ ಮೌನದಿಂದಿದ್ದನು. ಗಂಗಾರಾಮನಾದರೋ ಎದ್ದು ನಿಂತು—ಧೈರ್ಯದಿಂದ "ಏನಂದಿರಿ ? ಯಾವುದನ್ನೂ ನಾವು ಅಕ್ರಮವಾಗಿ ನಡೆಯಿಸಿಲ್ಲ. ಮಠಮುದ್ರೆಯೂ ತ್ರಿಮತಸ್ಥರೂ ದಯಮಾಡಿಸಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥನೆಯಿಂದ ಹೇಳಿಕಳುಹಿಸಿದೆವು ತಾವು ಗಳು ಬಾರದೆ ನಿರ್ದಯೆಮಾಡಿದಿರಿ, ಆದರೂ ನಾವು ಹಾಗೆಬಾರದಿದ್ದವರ ಮರ್ಯಾದೆಗಳನ್ನು ದೇವರ ಮುಂದುಹಿನಂತೆ ಭದ್ರವಾಗಿಟ್ಟಿರುವೆವ, ಆದುದ ರಿಂದ ನಾವು ಶಿಕ್ಷಾರ್ಹರಲ್ಲ ಮತ್ತು ಹೀಗೆ ಸ್ವೇಚ್ಛೆಯಾಗಿ ನಿಷ್ಕಾರಣವಾದ ತಿರಸ್ಕಾರದಿಂದ ನಿರಪರಾಧಿಗಳಾದ ನಮ್ಮಗಳನ್ನು ದೂರೀಕರಿಸುವುದಕ್ಕೆ ನಿಮ್ಮಗಳಿಗಧಿಕಾರವೂ ಇಲ್ಲ. ಸರಿಯಾದ ವಿಚಾರಣೆಯಿಂದ ನಮ್ಮಮೇಲೆ ತಪ್ಪುಹೊತ್ತರೆ ಆಗ್ಗೆ ನಮ್ಮನ್ನು ಶಿಕ್ಷಿಸುವುದಕ್ಕೆ ಗುರುಪೀಠಕ್ಕೆ ಮಾತ್ರ ಅಧಿಕಾರವುಂಟು ಮಠಮುದ್ರೆಯೆಂಬುವರು ಮಠದ ಸೇವಕರೇ ಹೊರತು ಮಠಾಧಿಪತಿಗಳಲ್ಲ ಇವರು ಶುಭಶೋಭನಾದಿಕಾರ್ಯಗಳಿಗೆ ಸಕಾಲದಲ್ಲಿ

ಮಠದ ಪ್ರತಿನಿಧಿಯಾಗಿ ಒಂದುನಿಂತು ಅತ್ಯಾವಶ್ಯಕವಾಗಿ ಮಾಡಬೇಕಾದ ಕೆಲಸವು ಮಂಗಳಾರತಿ ಮರ್ಯಾದವು. ಹೀಗೆ ಮಾಡದಿರುವುದು ಜೀವರ ತಪ್ಪಿತ. ಆದುದರಿಂದ ನಿಮ್ಮ ಈ ವಿಧವಾದ ತೀರ್ಪಿಗೆ ನಾವು ಬದ್ಧರಾಗತಕ್ಕವರಲ್ಲ'' ಎಂದು ಖಚಿತವಾಗಿ ಹೇಳಿಬಿಟ್ಟನು. ಬಳಿಕ ಸೀತಾಕಾಂತನೂ ಈತನೂ ಅಲ್ಲಿಂದ ಹೊರಟರು ಅಲ್ಲಿದ್ದವರಲ್ಲೂ ಹಲವರು ಇವರ ಪಕ್ಷವನ್ನೇ ವಹಿಸಿ ಇವರ ಹಿಂದೆಯೇ ಹೊರಟರು ಹೀಗೆ ಈವೂರಿನ ಬ್ರಾಹ್ಮಣರಲ್ಲಿ ಎರಡು ಪಂಗಡಗಳಾದವು. ಎರಡುಪಕ್ಷಗಳವರೂ ತಮ್ಮ ತಮ್ಮ ವಿಚಾರವನ್ನು ಪತ್ರಿಕೆಗಳ ಮೂಲಕ ಮಠದ ಗುರುಗಳಿಗೆ ಅರಿಕೆಮಾಡಿಕೊಂಡರು ಈ ವಿಷಯದಲ್ಲಿ ಯಾರದು ಸರಿ ಎಂಬ ಬಗ್ಗೆ ನಿಷ್ಕರ್ಷೆಯಾದ ತೀರ್ಮಾನದಿಂದ ಶ್ರೀಮುಖವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡು ಅದೇ ನಿರೀಕ್ಷಣೆಯಲ್ಲಿದ್ದರು.

ಉಭಯಪಕ್ಷದವರ ವಿಜ್ಞಾಪನಪತ್ರಗಳೂ ಗುರುಗಳ ಹಸ್ತಗತವಾಗುವುದಕ್ಕೆ ಮೊದಲೇ ಈ ಸಂಗತಿಯು ಜನರ ಮೂಲಕ ಅವರ ಶ್ರುತಿಪಥಕ್ಕೆ ತಲಪಿದ್ದಿತು ತರುವಾಯ ಗುರುಗಳು ಉಭಯರ ಮನಸ್ಸೆಗಳನ್ನೂ ಪರಿಶೀಲಿಸಿ ಈ ಮುಂದೆ ಹೇಳುವಂತೆ ತೀರ್ಮಾನಿಸಿದರು

(೧) ಸಭಾಪೂಜೆಗೆ ಸರ್ವರೂ ಬರಬೇಕೆಂದು ಸೀತಾಕಾಂತನು ಹೇಳಿಕಳುಹಿಸಿದ್ದರೂ ಮಠಮುದ್ರೆಯೂ ಇತರ ಹಲವರೂ ಹೋಗದೆ ವೃಥಾ ಆಕ್ಷೇಪಿಸುವುದು ಅನ್ಯಾಯ. (೨) ತ್ರಿಮತಸ್ಥರಿಗೂ ಆಹ್ವಾನವಿದ್ದರೂ ಅವರು ಹೋಗದಿದ್ದುದು ಆತನ ತಪ್ಪಿತವಲ್ಲ. (೩) ಮಠದ ಮತ್ತು ಮತತ್ರಯದ ತಾಂಬೂಲ ಮೊದಲಾದ ಮರ್ಯಾದೆಗಳನ್ನು ವಿನಾಸಲಾಗಿಟ್ಟಿರುವುದು ನಿರಾಕ್ಷೇಪವು. (೪) ಬ್ರಾಹ್ಮಣ ಸಮಾರಾಧನೆಯ ವಿಷಯವಾಗಿ ಆತನು ಯಥಾಶಕ್ತಿ ನಡೆಸುಕೊಂಡಿರುವನಾಗಿ ಕರ್ಮಲೋಪವಾಗಲಿಲ್ಲ. (೫) ಈಯಲ್ಪವಿಚಾರಗಳಿಗೋಸ್ಕರ ಅನ್ಯಾಯವಾದ ರೋಷಾವೇಶಗಳಿಗೊಳಗಾಗಿ ಅಗ್ರಹಾರಿಕರಾದ ಬ್ರಾಹ್ಮಣರು ಹೀಗೆ ಕಕ್ಷಿದ್ವಯಕ್ಕೆ ಅವಕಾಶವನ್ನುಂಟುಮಾಡಿಕೊಂಡುದು ಬಹಳ ಶೋಚನೀಯಾಂಶವಾಗಿದೆ. (೬) ಗೃಹಸ್ಥಪುರೋಹಿತರು, ಉಪನಯನ ಲಗ್ನಕ್ಕೆ ಹೋಗಿದ್ದವರು ಮುಂತಾದವರನ್ನೆಲ್ಲಾ ಸವ್ಯವಹಾರದಿಂದ ದೂರೀಕರಿಸಲು ಮಠಮುದ್ರೆ ಮೊದಲಾದ

ಒಂದು ಸಂಗಡದವರು ದುಡುಕಿ ಸ್ವತಂತ್ರಿಸಿ ಮಾಡಿರುವ ಅಪ್ಪಣೆಯು ಅವರ ಅಧಿಕಾರಕ್ಕೆ ಮೀರಿ ಗೌರವಕ್ಕೆ ಕುಂದನ್ನುಂಟುಮಾಡತಕ್ಕುದಾಗಿದೆ. ಆದರೂ ಈಸಲಕ್ಕೆ ಅವರುಗಳನ್ನು ಮನ್ನಿಸಿದೆ. ಇತಃಪರ ಇಂತಹ ನಡೆವಳಿಕೆಯೇನಾದರೂ ಕಂಡುಬಂದಲ್ಲಿ ಅದಕ್ಕೆ ಕಾರಣರಾದವರು ಕ್ರೂರವಾದ ಆಜ್ಞೆಗೆ ಗುರಿಯಾದಾರು. ಇದೇ ಸಂದರ್ಭದಲ್ಲಿ ನಾರಾಯಣಸ್ಮರಣಪೂರ್ವಕವಾಗಿ ಸುಂದರಗಿರಿ ಅಗ್ರಹಾರದ ಮಹಾಜನಗಳಿಗೆ ಹೇಳತಕ್ಕುದು ಮತ್ತೊಂದು ಸಂಗತಿಯುಂಟು. ಈಗ ಕಾಲಸ್ಥಿತಿಯು ಬಹಳ ವಿಷಮವಾಗಿದೆ. ಪ್ರತಿಯೊಬ್ಬರಿಗೂ, ಮುಖ್ಯವಾಗಿ ಮಾನಿಕರಿಗೆ ಅನ್ನೋದಕಗಳಿಗೂ ಕಷ್ಟವಾಗಿದೆ. ಹೀಗಿರುವಲ್ಲಿ ಹವ್ಯಕವ್ಯಗಳಲ್ಲಿ ಆಡಂಬರಕ್ಕೋಸ್ಕರ ಅತಿಯಾಗಿ ದುಂದುಮಾಡಿ ಸಾಲಗಾರರಾಗುವುದರಿಂದ ನಮ್ಮವರು ಇನ್ನೂ ಹೀನಸ್ಥಿತಿಗೆ ಬರುವ ಸಂಭವವುಂಟು. ನಮ್ಮ ಆರ್ಯಮತಕರ್ಮಗಳಲ್ಲಿ ಹೀಗೆ ದುಂದುಮಾಡಬೇಕೆಂದು ಎಲ್ಲಿಯೂ ಹೇಳಿಲ್ಲ ಭಕ್ತಿ ಮಂತ್ರ, ಜ್ಞಾನ ಇವು ಮುಖ್ಯವೇ ವಿನಾ ಶಕ್ತಿಯನ್ನು ಮೀರಬೇಕೆಂದಿಲ್ಲ. ಮಿತವ್ಯಯದಿಂದ, ಕರ್ಮಲೋಪವಿಲ್ಲದೆ ರಾ|| ಸೀತಾಕಾಂತನು ಹವ್ಯಕವ್ಯಗಳನ್ನು ನಡೆಯಿಸುತ್ತ ಇತರರಿಗೆ ಒಳ್ಳೆಯ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವುದು ಶ್ಲಾಘ್ಯವಾದ ಸಂಗತಿಯಾಗಿದೆ. ಮತ್ತು ಇದಕ್ಕೆ ಬೆಂಬಲರಾಗಿ ನಿಂತು ಪೌರೋಹಿತ್ಯವನ್ನು ಕೈಗೊಂಡು ಪಾಮರರ ಮಾತುಗಳನ್ನು ಪರಿಗಣಿಸದೆ ಸಾಂಗವಾಗಿ ಆಚಾರ್ಯಕಾರ್ಯವನ್ನು ನೆರವೇರಿಸಿದ ವೇ|| ಗಂಗಾರಾಮನಂತಹವರು ನಮ್ಮಲ್ಲಿ ಕೆಲವರಾದರೂ ಇದ್ದರೆ ಬ್ರಾಹ್ಮಣಸಂಪ್ರದಾಯಗಳು ಎಷ್ಟೋ ಒಳ್ಳೆಯಕ್ರಮದಲ್ಲಿ ನಡೆದಾವು. ಈ ಗೃಹಸ್ಥಪುರೋಹಿತರುಗಳ ಅನ್ಯಾದೃಶವಾದ ಧೈರ್ಯಾದಿಸಾಮರ್ಥ್ಯಗಳಿಗೆ ಆನಂದಿಸಿ ಅವರಿಬ್ಬರಿಗೂ ಈ ಸಂಸ್ಥಾನದಿಂದ ಎರಡುಜತೆ ಶಾಲುಗಳು ಸನ್ಮಾನವಾಗಿ ಕಳುಹಿಸಲ್ಪಟ್ಟಿರುವುವು.

ಒಂದುದಿನ ಸಾಯಂಕಾಲ. ಗೋಧೂಳಿ ಮುಹೂರ್ತ. ಸುಂದರಗಿರಿ ಅಗ್ರಹಾರದ ಬ್ರಾಹ್ಮಣರೆಲ್ಲಾ ಮನೆಗಳ ಜಗುಲಿಗಳಮೇಲೆ ಆಚಾರ್ಯಕಟ್ಟನ್ನು ಕಟ್ಟಿಕೊಂಡು ಕುಳಿತು ಲೋಕಾಭಿರಾಮವಾದ ಏನೇನೋ ಮಾತುಗಳನ್ನಾಡಿಕೊಳ್ಳುತ್ತಿರುವರು ಆಗ ಪರಸ್ಥಳಿಕರಾದ ಇಬ್ಬರು ಬ್ರಾಹ್ಮಣರು ಕೈಯು

ಲ್ಲೊಂದೊಂದು ಬೆಳ್ಳಿಯಕೋಲನ್ನು ಹಿಡಿದುಕೊಂಡು ಊರೊಳಕ್ಕೆ ಪ್ರವೇಶಿಸಿದರು. ಅವರು ಮೊಟ್ಟಮೊದಲು ಸೀತಾಕಾಂತ ಮತ್ತು ಗಂಗಾರಾಮ ಈ ಇಬ್ಬರ ಮನೆಗಳನ್ನು ಹುಡುಕಿಕೊಂಡು ಬಂದು ಶ್ರೀ ಮಠದಿಂದ ಶ್ರೀಮುಖವು ಬಂದಿರುವುದಾಗಿಯೂ ಆ ರಾತ್ರಿ ಊರಬಾಗಿಲ ಹನುಮಂತರಾಯನ ಗುಡಿಯಲ್ಲಿ ಆತನ ಪಕ್ಷದ ಬ್ರಾಹ್ಮಣರಲ್ಲಾ ಶ್ರೀಮುಖದ ಶ್ರವಣಕ್ಕಾಗಿ ಸಭೆಸೇರಬೇಕೆಂದೂ ಆ ವೇಳೆಗೆ ಮಠದ ಸರ್ವಾಧಿಕಾರಿಗಳೂ ದಯಮಾಡಿಸುವರೆಂದೂ ತಿಳಿಯಿಸಿ ಮಠದ ಹರಿಕಾರರನ್ನು ನೋಡುತಲೆ ಊರಲ್ಲೆಲ್ಲಾ ಬ್ರಾಹ್ಮಣಮಂಡಲಿಯಲ್ಲಿ ಗುಸಗುಸ. "ಸೀತಾಕಾಂತನಿಗೇನೋ ಬಂದಿತು" ಎನ್ನುವರು, "ಮಠಮುದ್ರೆಗೆ ತೊಂದರೆ" ಎನ್ನುವರು, "ಇಷ್ಟೆಲ್ಲಾ ಗಂಗಾರಾಮನ ಕೀರ್ತಿ," ಎನ್ನುವರು, "ಯಾರಾರಿಗೇನೇನು ಗತಿಯಾಗುವುದೊ!" ಎನ್ನುವರು, ಹೀಗೆ ಎಲ್ಲರೂ ತಮತಮಗೆ ತೋರಿದ ರೀತಿಯಲ್ಲಿ ಆಡಿಕೊಳ್ಳುತಬಂದರು. ಕ್ಲಿಪ್ತಕಾಲಕ್ಕೆ ಸರಿಯಾಗಿ ಸರ್ವಾಧಿಕಾರಿಗಳೂ ಕುದುರೆಯ ಬಂಡಿಯಲ್ಲಿ ಬಂದಿಳಿದರು. ಆಗ್ಗಾಗಲೇ ದೇವಾಲಯದಲ್ಲಿ ಸೇರಿದ್ದ ಉಭಯಪಕ್ಷದವರೂ ಅವರನ್ನು ಮರ್ಯಾದೆಯಿಂದ ಸ್ವಾಗತಮಾಡಿಕೊಂಡರು. ಒಳಿಕ ತಾಳಮೇಳಗಳ ಮತ್ತು ವೇದಘೋಷಗಳ ಸ್ವಸ್ತಿಯೊಡನೆ ಊರಿನ ಮುಖ್ಯವಾದ ರಾಜಮಾರ್ಗಗಳಲ್ಲೆಲ್ಲಾ ಶ್ರೀಮುಖದ ಮೆರವಣಿಗೆಯಾಯ್ತು. ತರುವಾಯ ಅದೇ ಗುಡಿಯಲ್ಲಿ, ಮೇಲೆಕಂಡಂತೆ ಲಿಖಿತರೂಪದಲ್ಲಿದ್ದ ಶ್ರೀಮುಖವು ಸರ್ವರಿಗೂ ಶ್ರವಣಮಾಡಲ್ಪಟ್ಟಿತು.

ಶ್ರೀರಾಮಭಕ್ತಶಿರೋಮಣಿಯಾದ ಶ್ರೀಮದಂಜನಾಕುಮಾರನಿಗೆ ಮಂಗಳಾರತಿಯನ್ನು ಬೆಳಗಿದುದಾಯಿತು. ಸರ್ವಾಧಿಕಾರಿಯು ರಾಮಚಂದ್ರನ ಉಪನಯನಸಂಬಂಧದಲ್ಲಿ ಅಗ್ರಹಾರದ ಬ್ರಾಹ್ಮಣವರ್ಗದಲ್ಲಿ ನಡೆದ ಅಂತಃಕಲಹಾದಿಗಳನ್ನು ಕ್ರೋಡೀಕರಿಸಿ ತಿಳಿಯಹೇಳಿದರು. ಗುರುಗಳಾದ ಶ್ರೀಭಗವತ್ಪಾದರು ಸೀತಾಕಾಂತ, ಗಂಗಾರಾಮ ಈ ದೊಡ್ಡಮನುಷ್ಯರುಗಳಿಗೆ ಅನುಗ್ರಹಿಸಿದ್ದ ಶಾಲುಜೋಡಿಗಳನ್ನು ಆಶೀರ್ವಾದಪುರಸ್ಸರವಾಗಿ ಕೊಟ್ಟರು. ಮಠಮುದ್ರೆಗೂ ಆತನ ಪಕ್ಷದವರಿಗೂ ಉಪನಯನ ವಿಷಯದಲ್ಲುಂಟಾಗಿದ್ದ ತಪ್ಪುತಿಳಿವಳಿಕೆಯನ್ನು ತಿದ್ದಿದರು. ಅಲ್ಲಿಂದ ಮುಂದಕ್ಕೆ ಆ ಗ್ರಾಮದಲ್ಲಿ ಬ್ರಾಹ್ಮಣರೆಲ್ಲರೂ ಏಕಮುಖವಾಗಿರಬೇಕೆಂದೂ ದ್ವೈಧೀಭಾವವು ನಿಷಿದ್ಧ

ವೆಂದೂ ಉಚಿತವಾದ ಉದಾಹರಣೆಗಳೊಡಗೂಡಿದ ಉಪನ್ಯಾಸಗಳಿಂದ ಎಲ್ಲರನ್ನೂ ಆನಂದಗೊಳಿಸಿದರು.

ಆ ಗ್ರಾಮದ ಬಡಬ್ರಾಹ್ಮಣರಿಗೆ ಹವ್ಯಕವ್ಯಾದಿಗಳಲ್ಲಿ ಅದುವರೆಗೂ ಉಂಟಾಗಿದ್ದ ತೊಂದರಗಳೆಲ್ಲಾ ತಪ್ಪುವಂತೆ ಆಯಿತು. ಯಾರುಬೇಕಾದರೂ ಸೀತಾಕಾಂತನಂತೆ ಅಥವಾ ಆತನು ಮಾಡಿದುದಕ್ಕಿಂಲೂ ಕಡಿಮೆ ವೆಚ್ಚದಿಂದ ಶುಭಾಶುಭಕರ್ಮಗಳನ್ನು ಯಥಾಶಕ್ತಿಯಾಗಿ ನಡೆಯಿಸಿಕೊಳ್ಳಲನುಕೂಲವಾಯ್ತು. ಅಲ್ಲಿಂದ ಮುಂದಕ್ಕೆ ಸುಂದರಗಿರಿಯ ಬ್ರಾಹ್ಮಣರೆಲ್ಲರೂ ಮಿತವ್ಯಯಕ್ಕೆ ಮೇಲ್ಪಂಕ್ತಿಯಾದರು



ಶ್ರೀ ಪಾರ್ಶ್ವನಾಥ ಪ್ರಿಂಟಿಂಗ್ ವರ್ಕ್ಸ್, ತುಮಕೂರು.

# ಶ್ಲಾಘ್ಯವಾದ ಪುಸ್ತಕಗಳು.

ಮೈಸೂರುರಾಜ್ಯದ ಒಳಗೂ ಹೊರಗೂ ವಿದ್ಯಾಇಲಾಖೆಗಳಲ್ಲೂ
ಕರ್ಣಾಟಕ ವಾಚಕಮಂಡಲಿಯಲ್ಲಿ ಮೆಚ್ಚಿಕೆಯನ್ನು ಪಡೆದ

**ಜೆ. ಕೃಷ್ಣಶಾಸ್ತ್ರಿ, ಕರ್ಣಾಟಕಸಾಹಿತ್ಯಸರಸ್ವತಿ, ವಿದ್ಯಾಭೂಷಣ.**

**ಇವರ ಗ್ರಂಥಗಳು.**

(೧) **ಕಿಂಡರ್‌ಗಾರ್ಟೆನ್ ಕಥೆಗಳು**—೧ ರೂ. ಸರ್ವೋತ್ತಮ ವಿಷಯ ಗಳನ್ನು ಕಥೆಗಳ ರೂಪದಲ್ಲೇ ಲಲಿತವಾಗಿ ತಿಳಿಸುವುದು. ಉಪಾಧ್ಯಾಯ ರಿಗೂ ಮಕ್ಕಳಿಗೂ ತಾಯ್ತಂದೆಗಳಿಗೂ ಆವಶ್ಯಕ. (೩ನೇ ಮುದ್ರಣ)

(೨.) **ಪ್ರಫುಲ್ಲೆ**—೧೨ ಆ. ಜಗತ್ಪ್ರಸಿದ್ಧವಾದ ಪತ್ತೇದಾರಿ ಕಾದಂಬರಿ. ಗ್ರಂಥ ಕರ್ತರ ಸಮ್ಮತಿಯಿಂದ ತೆನಗುಭಾಷೆಗೂ ಪರಿವರ್ತನೆಯಾಗಿದೆ. ಪ್ರತಿ ಗಳೆಲ್ಲಾ ಮುಗಿದಿವೆ. ಅನೇಕರ ಕೋರಿಕೆಯಂತೆ ಪುನಃ ಅಚ್ಚಾಗುತ್ತಿದೆ. ಇನ್ನು ೩ ತಿಂಗಳಿಗೆ ದೊರೆಯುವುದು.

(೩.) **ಸಾಗರಪ್ರಪಂಚ**—೧೦ ಆ. ಪ್ರಪಂಚದ ಸಮಸ್ತಸಮುದ್ರಸಾಗರ ಗಳ ಮನೋಹರವಾದ ವರ್ಣನೆ. ಮುತ್ತು, ಹವಳ, ಸ್ಪಂಜು, ಶಂಖ, ತಿಮಿಂಗಲದ ಬೇಟೆ, ಎಸ್ಕಿಮೋಗಳು ಇಂತಹ ಸೋಜಿಗವಾದ ವಿಷಯ ಗಳನ್ನು ತಿಳಿಸಿ ಜ್ಞಾನವನ್ನು ಹೆಚ್ಚಿಸುವುದು

(೪) **ಬೋಧನಕ್ರಮಸಂಗ್ರಹ**—೨|| ಆ. ಉಪಾಧ್ಯಾಯರಿಗೂ ಟ್ರೇನಿಂಗ್ ವಿದ್ಯಾರ್ಥಿಗಳಿಗೂ ಕೈಗನ್ನಡಿ. (೨ನೇ ಮುದ್ರಣ.)

(೫) **ನಡೆನಳಿ**—೧ ರೂ. ಪ್ರತಿಯೊಬ್ಬರೂ ಓದಿ ನಾಗರಿಕರಾಗಬೇಕಾದದ್ದು.

(೬) **ರಾಮಚಂದ್ರ**—೧೪ ಆ. ಸಾಮಾಜಿಕ ಕಾದಂಬರಿ. ಈಗತಾನೆ ಹೊಸ ದಾಗಿ ತಯಾರಾಗಿದೆ

ಈ ಮುಂದಣಪುಸ್ತಕಗಳು ಮುಗಿದು ಹೋಗಿವೆ.

(೭.) **ಜಪಾನ್ ಸಾಮ್ರಾಜ್ಯ.** (೮.) **ಉತ್ತಮ.** (೯.) **ಟಿಪ್ಪಣಿಗಳ ಪುಸ್ತಕ.** (೧೦) **ನೀಲಗಿರಿಯೂ ಅಲ್ಲಿಯ ನಿವಾಸಿಗಳೂ.** (೧೧) **ಪರೀಕ್ಷೆಗಳಲ್ಲಿ ಉತ್ತರಬರೆಯುವ ವಿಧಾನ.** (೧೨.) **ಉನ್ಮತ್ತೆ** (೧೩.) **ಕೋತಿಯ ಕಥೆ.** (೧೪.) **ಕುದುರೆಯ ಕಥೆ**

ದೊರೆಯುವ ಸ್ಥಳಗಳು :—

ಬೆಂಗಳೂರು —ಎಲ್ಲಾ ಪುಸ್ತಕವ್ಯಾಪಾರಿಗಳಲ್ಲೂ

ಮೈಸೂರು:—ಪ್ರೋಗ್ರೆಸ್ ಬುಕ್‌ಸ್ಟಾಲ್

**ತುಮಕೂರು —ಜೆ. ಕೃಷ್ಣಶಾಸ್ತ್ರಿ, ಡಿ। ನಾರ್ಮಲ್‌ಸ್ಕೂಲ್.**

೧೨-೩-೧೯೨೫. ಗ್ರಂಥಕರ್ತ.